|| ಶ್ರೀಃ ||

# ವೇಣೀಸಂಹಾರನಾಟಕಪ್ರತಿಕೃತಿ



ಗ್ರಂಥಕರ್ತರು :

**ಆಸ್ಥಾನಮಹಾವಿದ್ವಾನ್**

**ಯಂ. ಸೀತಾರಾಮಶಾಸ್ತ್ರಿಗಳು**



ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು



ಬೆಲೆ ೧ ರೂ.
ಕ್ಯಾಲಿಕೊ ೨-೦-೦



ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್
ಮಹಾಪ್ರಭುಗಳವರು

# ಮುನ್ನುಡಿ.

---

ಈ ಲೋಕದಲ್ಲಿ ಸಕಲ ಪ್ರಾಣಿಗಳೂ ಆನಂದವನ್ನೇ ಬಯಸುವುವು. ದುಃಖದಿಂದ ಎಂತಾದರೂ ಬಿಡುಗಡೆಹೊಂದಬೇಕೆಂದು ಅಪೇಕ್ಷೆಪಡುವುವು. ಅದರಲ್ಲಿಯೂ ಮನುಷ್ಯರು ವಿಶೇಷವಾಗಿ ಆನಂದವನ್ನು ಅನುಭವಿಸುವುದಕ್ಕೂ ವ್ಯಸನವನ್ನು ಪರಿಹರಿಸಿಕೊಳ್ಳುವುದಕ್ಕೂ ಪ್ರಯತ್ನಮಾಡುವರು; ಅಲ್ಲದೆ ತಂತಮ್ಮ ಬುದ್ಧಿಸಂಪತ್ತಿಯಿಂದ ಆ ಆ ಆನಂದಸಾಧನಗಳನ್ನು ಕಲ್ಪಿಸಿಕೊಳ್ಳುವರು. ರಸಜ್ಞರಿಗಾದರೆ ಕಾವ್ಯಕ್ಕಿಂತಲೂ ಮನಸ್ಸಿಗೆ ಪರಮಾನಂದಪ್ರದವಾದುದು ಬೇರೊಂದು ಇಲ್ಲವೇ ಇಲ್ಲ. ಈ ಕಾವ್ಯವು ತತ್ತದ್ರಸಪರಿಪೂರ್ಣವಾಗಿರುವುದರಿಂದ ವಿಷಯಾಂತರಗಳ ಕಡೆಗೆ ಹೋಗದಂತೆ ಮನಸ್ಸನ್ನು ಎಳೆದು ಪರಿಭಾವನೆಯಲ್ಲಿಡುವುದು. ಕಾವ್ಯರಸವನ್ನು ಆಸ್ವಾದಿಸಿ ಪರಿಭಾವನೆಮಾಡುವವನು ಇತರ ವಿಷಯುಗಳ ಕಥೆಯನ್ನೇ ಮರೆತು ಕ್ಷಣಕಾಲ ಬ್ರಹ್ಮಾನಂದಕ್ಕಿಂತಲೂ ವಿಶೇಷವಿಲ್ಲದ ಆನಂದವನ್ನು ಅನುಭವಿಸುವನು.

ಕಾವ್ಯವೆಂಬುದು ರಸಾತ್ಮಕವಾದ ವಾಕ್ಯಸಮೂಹವೆಂದು ಹೇಳಲ್ಪಡುವುದು. ಈ ಕಾವ್ಯವು ಮೂರುಬಗೆಗಳುಳ್ಳದು; ಪದ್ಯಾತ್ಮಕ, ಗದ್ಯಾತ್ಮಕ, ಮಿಶ್ರ-ಎಂದು. ಪದ್ಯಾತ್ಮಕ-ರಘುವಂಶ ಮುಂತಾದುದು; ಗದ್ಯಾತ್ಮಕ-ಕಾದಂಬರಿ ಮೊದಲಾದುದು. ಚಂಪೂಭಾರತ ಶಾಕುಂತಲಾದಿಯಾದುದು ಮಿಶ್ರ. ಮಿಶ್ರಕಾವ್ಯದಲ್ಲಿ ಎರಡು ಬಗೆ; ದೃಶ್ಯ ಶ್ರವ್ಯ-ಎಂದು. ಅವುಗಳಲ್ಲಿ ಚಂಪೂಗ್ರಂಥ ಶ್ರವ್ಯ; ದೃಶ್ಯ-ರೂಪಕವೆಂಬುದು. ಆದರೆ ದೃಶ್ಯವೂ ಶ್ರವ್ಯವೇ ಅಹುದು; ಆದರೂ ದೃಶ್ಯತ್ವಕ್ಕೇ ಪ್ರಾಧಾನ್ಯವಿರುವುದರಿಂದ ಅದು ದೃಶ್ಯವೆಂದು ಹೇಳಲ್ಪಡುವುದು. ಆಸ್ವಾದಿಸಲ್ಪಡುವ ಕಾವ್ಯಗಳು ನಿರತಿಶಯವಾದ ಆನಂದವನ್ನೇನೋ ಉಂಟುಮಾಡುವುವು; ಆದರೂ ಅವುಗಳಲ್ಲಿ ದೃಶ್ಯಗಳೇ

ಸರ್ವೋತ್ತಮಗಳಾದ ಆನಂದಜನಕಂಗಳು. ಇವುಗಳಲ್ಲವೆ ಪ್ರತ್ಯಕ್ಷ ವಾಗಿ ಆ ಆ ಘಟನೆಗಳನ್ನು ಪ್ರದರ್ಶಿಸುವುವು; ಮತ್ತು ರಸಾಸಾರ ಗಳಿಂದ ಪ್ರೇಕ್ಷಕರ ಅಂತಃಕರಣಗಳನ್ನು ತೇಲಾಡಿಸುವುವು. ಕವಿರಚಿತ ವಾಗಿ ಪಾತ್ರಗಳಿಂದ ಅಭಿನಯಿಸಲ್ಪಡುತಿರುವ ಬಗೆಬಗೆಯ ಲೋಕ ಚರಿತ್ರವು ಬಲಾತ್ಕರಿಸಿ ವಿಷಯಾಂತರಗಳಿಂದ ಎಳೆದು ಮನಸ್ಸನ್ನು ಸಂತೋಷದಲ್ಲಿ ಕೂಡಿಸುವುದು.

ಯಾವನ ಮನಸ್ಸು ದೃಶ್ಯಪ್ರಬಂಧದಿಂದ ಆಕರ್ಷಿಸಲ್ಪಡುವು ದಿಲ್ಲವೋ ಅಂತಹ ಮನುಷ್ಯನೆಂಬವನು ಯಾವನೊಬ್ಬನೂ ಇರನು. ಕವಿಶಿರೋಮಣಿಯಾದ ಶ್ರೀಮತ್ಕಾಳಿದಾಸನು-ಬೇರೆ ಬೇರೆ ರುಚಿಯುಳ್ಳ ಲೋಕಕ್ಕೆ ಸಂತೋಷಜನಕಂಗಳು ಅನೇಕಪ್ರಕಾರಗಳಿದ್ದರೂ ನಾಟ್ಯವು ಮುಖ್ಯವಾದೊಂದು ಸಂತೋಷಜನಕವು-ಎಂದು ಹೇಳಿರುವ ಮಾತು ಸಮುಚಿತವಾದುದು. ನಾಟ್ಯ, ರೂಪ, ರೂಪಕ, ದೃಶ್ಯ, ಕಾವ್ಯ-ಎಂಬಿವು ಸಮಾನಾರ್ಥವನ್ನೇ ಬೋಧಿಸುವ ಶಬ್ದಗಳು. ಅವುಗಳಲ್ಲಿ ರಾಮ ಯುಧಿಷ್ಠಿರಾದಿ ನಾಯಕಪ್ರಭೃತಿಗಳ ಅವಸ್ಥೆಗಳನ್ನು ನಟರು ಅನು ಕರಿಸುವುದೇ ನಾಟ್ಯವೆಂಬುದು. ಈ ಅವಸ್ಥೆಗಳ ಅನುಕರಣವೇ ಅಭಿ ನಯವೆಂದು ಹೇಳಲ್ಪಡುವುದು. ಅಭಿನಯವಿದು-ರೂಪಿಸಲ್ಪಡುವುದು-ಎಂದರೆ, ಅವಲೋಕಿಸಲ್ಪಡುವುದು-ಎಂಬುದರಿಂದ ರೂಪವೆಂದು ಹೇಳ ಲ್ಪಡುವುದು. ರಾಮಾದಿಗಳ ಅವಸ್ಥೆಯು ನಟರಲ್ಲಿ ಆರೋಪಿಸಲ್ಪಡುವು ದೆಂಬುದರಿಂದ ಅದೇ ರೂಪಕವೆಂದು ಹೇಳಲ್ಪಡುವುದು. ಅದೇ ದೃಶ್ಯವಾದುದೆಂಬುದರಿಂದಲೂ ಕವಿಯ ಕರ್ಮವೆಂಬುದರಿಂದಲೂ ದೃಶ್ಯ ಕಾವ್ಯವೆನಿಸುವುದು. ಈ ದೃಶ್ಯಕಾವ್ಯವು ರೂಪಕ ಉಪರೂಪಕ-ಎಂಬ ಭೇದದಿಂದ ದ್ವಿವಿಧವಾಗಿರುವುದು. ಆದರಲ್ಲಿ ರೂಪಕವು-ನಾಟಕ, ಪ್ರಕರಣ, ಭಾಣ, ವ್ಯಾಯೋಗ, ಸಮವಾಕಾರ, ಡಿಮ, ಈಹಾಮೃಗ, ಅಂಕ, ವೀಥಿ, ಪ್ರಹಸನ-ಎಂದು ಹತ್ತು ಪ್ರಕಾರಗಳುಳ್ಳದು. ನಾಟಕ

ದ್ವಿವಿಧವು. ನಾಟಕ ಮಹಾನಾಟಕ-ಎಂದು. ನಾಟಕವು-ಅಭಿಜ್ಞಾನ ಶಾಕುಂತಲ ಮುಂತಾದುದು. ಮಹಾನಾಟಕವು-ಬಾಲರಾಮಾಯಣ ಮುಂತಾದುದು. ಪ್ರಕರಣ-ಮೃಚ್ಛಕಟಿಕದಂತಹುದು. ಭಾಣ-ಪಂಚಾಯುಧ ಪ್ರಪಂಚ ಮುಂತಾದುದು. ಸಮವಾಕಾರ-ಸಮುದ್ರಮಥನಾದಿ. ಡಿಮ-ತ್ರಿಪುರದಹನವೆಂಬುದು. ಈಹಾಮೃಗ-ಕುಸುಮಶೇಖರವಿಜಯ ಮುಂತಾದುದು. ಅಂಕವು-ಶರ್ಮಿಷ್ಠಾಯಯಾತಿ ಮೊದಲಾದುದು. ವೀಥಿ-ಮಾಲವಿಕ ಮುಂತಾದುದು. ಪ್ರಹಸನ-ಲಟಕಮೇಲಕಾದಿ-ಎಂದು.

ಉಪರೂಪಕಗಳು ಹದಿನೆಂಟು ; ನಾಟಿಕೆ, ಸಟ್ಟಕ, ಗೋಷ್ಠಿ, ತ್ರೋಟಕ, ನಾಟ್ಯರಾಸಕ, ಪ್ರಸ್ಥಾನ, ಉಲ್ಲಾಪ್ಯ, ಕಾವ್ಯ, ಪ್ರೇಂಖಣ, ರಾಸಕ, ಸಂಲಾಪಕ, ಶ್ರೀಗದಿತ, ಶಿಲ್ಪಕ, ವಿಲಾಸಿಕೆ, ದುರ್ಮಲ್ಲಿಕೆ, ಪ್ರಕರಣಿ, ಹಲ್ಲೀಶ, ಭಾಣಿಕೆ-ಎಂದು.

ಅವುಗಳಲ್ಲಿ ನಾಟಿಕೆ-ರತ್ನಾವಳಿ ಮುಂತಾದುದು. ಸಟ್ಟಕ-ಕರ್ಪೂರಮಂಜರಿ ಮೊದಲಾದುದು. ಗೋಷ್ಠಿ-ರೈವತಮದನಿಕಾದಿ. ತ್ರೋಟಕ-ವಿಕ್ರಮೋರ್ವಶೀಯ ಮುಂತಾದುದು. ನಾಟ್ಯರಾಸಕ-ವಿಲಾಸವತಿ ಮುಂತಾದುದು. ಪ್ರಸ್ಥಾನ-ಶೃಂಗಾರತಿಲಕ ಮುಂತಾದುದು. ಉಲ್ಲಾಸ-ದೇವೀಮಹಾದೇವ ಮೊದಲಾದುದು. ಕಾವ್ಯ-ಯಾದವೋದಯ ಮುಂತಾದುದು. ಪ್ರೇಂಖಣ-ವಾಲಿವಧ ಮುಂತಾದುದು. ರಾಸಕ-ಮೇನಕಾಹಿತ ಮುಂತಾದುದು. ಸಂಲಾಪಕ-ಮಾಯಾಕಾಪಾಲಿಕ ಮುಂತಾದುದು. ಶ್ರೀಗದಿತ-ಸುಭದ್ರಾಹರಣ ಮುಂತಾದುದು. ಶಿಲ್ಪಕ-ಕನಕಾವತೀಮಾಧವ ಮೊದಲಾದುದು. ದುರ್ಮಲ್ಲಿಕೆ-ಬಿಂದುಮತಿ ಮುಂತಾದುದು. ಹಲ್ಲೀಶ-ಕೇಳಿರೈವತಕ ಮುಂತಾದುದು. ಭಾಣಿಕೆ-ಕಾಮದತ್ತಾ ಮುಂತಾದುದು. ವಿಲಾಸಿಕಾಪ್ರಕರಣಿಕೆಗಳಿಗೆ ಉದಾಹರಣವು ಗೋಚರವಾಗಿಲ್ಲ. ಇಲ್ಲಿ ಬಹುಭಾಗಸಾಹಿತ್ಯದರ್ಪಣದಲ್ಲಿರುವ ಉದಾಹರಣೆಗಳನ್ನೇ ಕೊಟ್ಟಿರುವೆವು. ಇವುಗಳಲ್ಲಿ ಅನೇಕಗಳು ಈಗ ದೊರೆಯುವುದಿಲ್ಲ.

ರೂಪಕವು ಅಭಿನಯಾತ್ಮಕವಾಗಿದ್ದರೂ ಅದರಲ್ಲಿ ರಸಭೇದ ದಿಂದಲೂ ನಾಯಕಭೇದದಿಂದಲೂ ಇತಿವೃತ್ತಭೇದದಿಂದಲೂ ಇಷ್ಟು ಭೇದಗಳು ಉಂಟಾಗಿರುವುವು. ಅವುಗಳಲ್ಲಿ ಎಂಟು ಅಥವಾ ಒಂಬತ್ತು ಅಥವಾ ಹತ್ತು. ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಬೀಭತ್ಸ, ರೌದ್ರ-ಎಂದು ನಾಟ್ಯದಲ್ಲಿ ಎಂಟೇ ರಸಗಳೆಂದು ಕೆಲವರು, ಶಾಂತವೂ ಒಂಬತ್ತನೆಯದೆಂದು ಇನ್ನು ಕೆಲವರು, ವತ್ಸಲ-ಎಂಬುದೂ ಹತ್ತನೆಯದೆಂದು ಇತರರು. ಶಾಂತರಸಪ್ರಾಧಾನ್ಯದಿಂದ ರೂಪಕಗಳಲ್ಲಿ ಪ್ರಯೋಗವು ಭರ್ತೃಹರಿನಿರ್ವೇದ ಮುಂತಾದುದರಲ್ಲಿ ಕಂಡುಬರುವುದು. ರಸವೆಂಬುದು ಆ ಆ ಭಾವಗಳಿಂದ ವ್ಯಕ್ತತೆಯನ್ನು ಪಡೆದು ಹೃದಯಾನಂದವನ್ನುಂಟುಮಾಡತಕ್ಕ ರತಿ ಮುಂತಾದುದು. ಅದು ಅವರವರ ಮತದಿಂದ ಎಂಟು ತೆರನಾಗಿಯೂ ಒಂಬತ್ತು ತೆರನಾಗಿಯೂ ಹತ್ತುತೆರನಾಗಿಯೂ ಭೇದವನ್ನು ಹೊಂದಿರುವುದು.

ರತಿ ಉತ್ಸಾಹ ಶೋಕ ವಿಸ್ಮಯ ಹಾಸ ಭಯ ಜುಗುಪ್ಸೆ ಕ್ರೋಧ—ಎಂದು ಎಂಟು. ಶಮ ಒಂಬತ್ತನೆಯದು ; ವತ್ಸಲತೆ ಹತ್ತನೆಯದು. ಅವುಗಳಲ್ಲಿ ರತಿಯೆಂಬುದು—ಅನುಕೂಲಗಳಾದ ಅರ್ಥಗಳಲ್ಲಿ ಮನಸ್ಸು ಬಾಗಿರುವುದು. ಉತ್ಸಾಹವೆಂಬುದು—ಕಾರ್ಯಪ್ರಯತ್ನದಲ್ಲಿ ಸ್ಥಿರತರವಾದ ಸಡಗರ. ಪ್ರೀತ್ಯಾಸ್ಪದವಾದ ವಸ್ತುವಿನ ವಿನಾಶದಿಂದ ಮನಸ್ಸಿಗೆ ಉಂಟಾಗುವ ದುಗುಡವು ಶೋಕವೆನಿಸುವುದು. ಹೊಸತಾದ ವಸ್ತುವನ್ನು ನೋಡುವುದು ಮುಂತಾದುದರಿಂದ ಉಂಟಾಗುವ ಮನಸ್ಸಿನ ವಿಸ್ಫುರಣವು—ವಿಸ್ಮಯವು. ವಿಕಾರವುಳ್ಳ ನಡೆನುಡಿ ಮುಂತಾದವುಗಳ ದರ್ಶನಯೋಗದಿಂದ ಉಂಟಾಗುವ ಮನಸ್ಸಿನ ವಿಕಾಸವು ಹಾಸವೆನಿಸುವುದು. ಕೋಪಗೊಂಡವರು ಮುಂತಾದವರನ್ನು ನೋಡುವುದರಿಂದ ಮನಸ್ಸಿಗೆ ಆಕುಲತೆಯನ್ನುಂಟುಮಾಡುವ ಭಾವವು ಭಯ ವಿಷಯಗಳಲ್ಲಿರುವ ದೋಷಗಳ ಸಾಕ್ಷಾತ್ಕಾರದಿಂದ ಉಂಟಾಗುವ

ನಿಂದನವು ಜುಗುಪ್ಸೆ. ತನಗೆ ಪ್ರತಿಕೂಲರಾಗಿ ವರ್ತಿಸುವರ ವಿಷಯದಲ್ಲಿ ಮನಸ್ಸು ತೀವ್ರವಾಗಿರುವುದು—ಕ್ರೋಧ. ಇಚ್ಛಾರಹಿತನಾಗಿ ವರ್ತಿಸುವುದರಿಂದ ಮನಸ್ಸಿಗೆ ಉಂಟಾಗುವ ವಿಶ್ರಾಂತಿಸುಖವು—ಶಮ. ಮಕ್ಕಳು ಮೊದಲಾದವರಲ್ಲಿ ಇರುವ ಸ್ನೇಹವು—ವತ್ಸಲತೆ. ಈ ಭಾವಗಳು ಸ್ಥಿರವಾಗಿರುವುದರಿಂದ ಸ್ಥಾಯಿಭಾವಗಳೆಂದು ಹೇಳಲ್ಪಡುವುವು. ಇವುಗಳೇ ವ್ಯಕ್ತಗಳಾಗಿ ಆನಂದವನ್ನು ಉಂಟುಮಾಡತಕ್ಕ ರಸಗಳೆನಿಸುವುವು. [ಯಾವುಗಳ ಯೋಗದಿಂದ ರತ್ಯಾದಿಗಳು ವ್ಯಕ್ತತೆಯನ್ನು ಪಡೆಯುವುವೋ ಆ ಭಾವಗಳು—ವಿಭಾವ ಅನುಭಾವ ಸಂಚಾರಿಭಾವ—ಎಂದು ಮೂರುತೆರಗಳಾಗಿರುವುವು. ಅವುಗಳಲ್ಲಿ ಯಾವುವು ಆತ್ಮಯೋಗದಿಂದ ಪರಗತವಾದ ರತ್ಯಾದಿಭಾವವನ್ನು ವಿಶೇಷದಿಂದ ಭಾವಿಸುವುವೋ ಅವು ವಿಭಾವಗಳು; ಇವುಗಳಲ್ಲಿ ಆಲಂಬನವಿಭಾವಗಳು, ಉದ್ದೀಪನವಿಭಾವಗಳು—ಎಂದು ಎರಡುಪ್ರಕಾರಗಳು. ಅವುಗಳಲ್ಲಿ ಯಾವುವನ್ನು ಅವಲಂಬಿಸಿ ಪ್ರವೃತ್ತಗಳಾದ ರತ್ಯಾದಿಗಳ ಉದ್ಬೋಧವಾಗುವುದೋ ಅವು ಆಲಂಬನವಿಭಾವಗಳು. ಎಂತೆಂದರೆ—ಶೃಂಗಾರದಲ್ಲಿ, ನಾಯಕನಲ್ಲಿರುವ ರತಿಯು ನಾಯಿಕೆಯನ್ನು ಅವಲಂಬಿಸಿ ಉದ್ಬುದ್ಧವಾಗುವುದೆಂಬುದರಿಂದ ನಾಯಿಕೆ ಆಲಂಬನವು; ಅಥವಾ ನಾಯಕನಾದರೂ ನಾಯಿಕೆಯಲ್ಲಿರುವ ರತಿಗೆ ಆಲಂಬನವು. ಉದ್ದೀಪನ ವಿಭಾವಗಳು—ಉದ್ಬುದ್ಧಪ್ರಾಯವಾದರಸವನ್ನು ಹೆಚ್ಚಾಗಿ ಉದ್ಬೋಧನಗೊಳಿಸುವ ದೇಶಕಾಲಾದಿಗಳು. ಎಂತೆಂದರೆ—ಶೃಂಗಾರದಲ್ಲಿ ವಸಂತಾದಿಗಳು—ಕಾಲಗಳು.

ಆಲಂಬನದ ಚೇಷ್ಟೆಗಳೂ ಉದ್ದೀಪನವಿಭಾವಗಳೇ. ಈ ರೀತಿ ವಿಭಾವಗಳಿಂದ ಉದ್ಬುದ್ಧವಾದ ರತಿ ಮುಂತಾದುದು ಯಾವುದರಿಂದ ಹೊರಗೆ ಪ್ರಕಾಶಗೊಳಿಸಲ್ಪಡುವುದೋ ಅದು ಅನುಭಾವವು. ಇದೂ ರತ್ಯಾದಿ ಜನ್ಯಕಾರ್ಯರೂಪವಾದ, ಸ್ವೇದಸ್ತಂಭರೋಮಾಂಚ ಮುಂತಾ

ದುದು. ಯಾವುವು ಒಂದುಕಾಲದಲ್ಲಿ ಪ್ರಾದುರ್ಭವಿಸಿದುವುಗಳಾಗಿ ಮತ್ತೊಂದುಕಾಲದಲ್ಲಿ ತಿರೋಭೂತಗಳಾಗಿ ಸ್ಥಾಯಿಯೊಡನೆ ಚರಿಸುವುವೋ ಅವು ಸಹಚಾರಿಗಳೆಂದು ಹೇಳಲ್ಪಡುವುವು. ಇವುಗಳೇ ವಿಶೇಷವಾಗಿ ಆಭಿಮುಖ್ಯದಿಂ ಚರಿಸುವುವೆಂಬುದರಿಂದ ವ್ಯಭಿಚಾರಿಗಳೆಂದು ಹೇಳಲ್ಪಡುವುವು. ಇವುಗಳ ಭೇದಗಳನ್ನು ದಶರೂಪಕ ಮುಂತಾದ ಗ್ರಂಥಗಳಲ್ಲಿ ನೋಡಬಹುದು. ಈ ರಸಗಳ ಭೇದದಿಂದ ರೂಪಕಗಳು ಬೇರ್ಪಡುವುವು.

ಯಾವ ಫಲವನ್ನು ಉದ್ದೇಶಿಸಿ ಕಾರ್ಯವು ಆರಂಭಿಸಲ್ಪಡುವುದೋ ಆ ಫಲಕ್ಕೆ ನಾಯಕನು ಸ್ವಾಮಿ. ಈತನೇ ಅಧಿಕಾರಿಯೆಂದೂ ನೇತೃವೆಂದೂ ಹೇಳಲ್ಪಡುವನು ; ಯುಧಿಷ್ಠಿರನಂತೆ. ಯಾವನು ಈ ನಾಯಕನಿಗೆ ಪ್ರತಿಕೂಲನೋ ಅವನು ಪ್ರತಿನಾಯಕನೆಂದು ಹೇಳಲ್ಪಡುವನು ; ದುರ್ಯೋಧನನಂತೆ.

ನಾಯಕನು-ಧೀರೋದಾತ್ತ, ಧೀರೋದ್ಧತ, ಧೀರಲಲಿತ, ಧೀರಪ್ರಶಾಂತ-ಎಂದು ನಾಲ್ಕು ಪ್ರಕಾರಗಳುಳ್ಳವನೆನಿಸಿರುವನು. ಅವರಲ್ಲಿ-ಆತ್ಮಶ್ಲಾಘೆಯಿಲ್ಲದವನೂ ಕ್ಷಮಾಶೀಲನೂ ಅತಿ ಗಂಭೀರನೂ ಹರ್ಷಶೋಕಾದಿಗಳಿಂದ ತಿರಸ್ಕರಿಸಲ್ಪಡದ ಸ್ವಭಾವವುಳ್ಳವನೂ ವಿನಯದಿಂದ ಮುಚ್ಚಲ್ಪಟ್ಟ ಗರ್ವವುಳ್ಳವನೂ ಚಂಚಲನಲ್ಲದವನೂ ದೃಢಪ್ರತಿಜ್ಞನೂ ಆದವನು-ಧೀರೋದಾತ್ತನೆನಿಸುವನು. ಅಂತಹ ನಾಯಕನು-ಯುಧಿಷ್ಠಿರ ಮುಂತಾದವನು. ವಂಚನೆಯಲ್ಲಿ ಆಸಕ್ತನೂ ಪ್ರಚಂಡನೂ ಚಪಲನೂ ಹೆಚ್ಚಾದ ಅಹಂಕಾರದರ್ಪಗಳುಳ್ಳವನೂ ಆತ್ಮಶ್ಲಾಘಿಯೂ ಆದವನು ಧೀರೋದ್ಧತನೆನಿಸುವನು. ಇಂತಹನು-ಭೀಮ ಮುಂತಾದವನು. ನಿಶ್ಚಿಂತನೂ ಸರ್ವಕಾಲದಲ್ಲಿಯೂ ಮೃದುವೂ ಕಲಾನಿಷ್ಠನೂ ಆದವನು-ಧೀರಲಲಿತನೆನಿಸುವನು. ಅಂತಹನು-ವತ್ಸರಾಜಾದಿ. ಸಾಮಾನ್ಯಗುಣಗಳಿಂದ ತುಂಬಿದ ಬ್ರಾಹ್ಮಣ ಮುಂತಾದವನು-ಧೀರಪ್ರಶಾಂತ ; ಮಾಧವಾದಿಗಳಂತೆ.

ಶೃಂಗಾರರಸವಿಷಯದಲ್ಲಾದರೋ ಈ ನಾಯಕನು-ದಕ್ಷಿಣ, ಧೃಷ್ಟ, ಅನುಕೂಲ, ಶಠ-ಎಂದು ಪ್ರತ್ಯೇಕವಾಗಿ ನಾಲ್ಕು ಬಗೆಗಳನ್ನು ಹೊಂದಿರುವನು. ಇವರ ಹೆಸರುಗಳೇ ಸಾಮಾನ್ಯವಾಗಿ ಲಕ್ಷಣಗಳೆನಿಸು ವುವು. ಈ ರೀತಿ ಹದಿನಾರು ಪ್ರಕಾರಗಳುಳ್ಳವರಾದ ಇವರು ಮತ್ತೆ ಉತ್ತಮ ಮಧ್ಯಮ ಅಧಮ-ಎಂದು ಪ್ರತ್ಯೇಕವಾಗಿ ಮೂರುಬಗೆಯುಳ್ಳ ವರು. ಅಂತೂ ಈ ರೀತಿ ನಾಲ್ವತ್ತೆಂಟು ನಾಯಕಭೇದಗಳು. ಈ ನಾಯಕಭೇದವೂ ರೂಪಕಭೇದದಲ್ಲಿ ಪ್ರಯೋಜಕವು. ನಾಯಿಕಾಭೇದ ಗಳನ್ನು ಬೇರೆಕಡೆ ನೋಡಬಹುದು.

ರೂಪಕಭೇದದಲ್ಲಿ ಇತಿವೃತ್ತವೂ ಮತ್ತೊಂದು ಪ್ರಯೋಜಕವು. ಈ ಇತಿವೃತ್ತವೇ ವಸ್ತುವೆಂದು ರೂಪಕದಲ್ಲಿ ಹೇಳಲ್ಪಡುವುದು. ಇದೇ ರೂಪಕಕ್ಕೆ ಶರೀರವು. ಇದೂ ಎರಡು ಬಗೆಗಳುಳ್ಳುದು; ಆಧಿಕಾರಿಕ, ಪ್ರಾಸಂಗಿಕ-ಎಂದು. ಅವುಗಳಲ್ಲಿ ಅಧಿಕಾರಿಯ ಸಂಬಂಧವುಳ್ಳುದು-ಆಧಿಕಾರಿಕ; ಫಲದಲ್ಲಿ ಅಧಿಕಾರವುಳ್ಳವನು ಅಧಿಕಾರಿ. ಈ ಇತಿವೃತ್ತ ದಿಂದ ಯಾವ ಫಲವುಂಟಾಗುವುದೋ ಅದರಲ್ಲಿ ಯಾವನಿಗೆ ಸ್ವಾಮಿತ್ವ ವುಂಟೋ ಆತನು-ಅಧಿಕಾರಿ. ಆತನೇ ನಾಯಕನು. ಆದುದರಿಂದ ನಾಯಕಸಂಬಂಧಿಯಾದ ಇತಿವೃತ್ತವು-ಆಧಿಕಾರಿಕವೆನಿಸುವುದು. ಯಾ ವುದು ಪ್ರಸಂಗವಶದಿಂದ ಮತ್ತೊಬ್ಬನ ಇತಿವೃತ್ತವೂ ನಾಯಕನ ಇತಿ ವೃತ್ತಾಂತಕ್ಕೆ ಉಪಕಾರಕವಾಗುವುದೋ ಅದು ಪ್ರಾಸಂಗಿಕ. ಎಂತೆಂ ದರೆ-ರಾಮಾಯಣದಲ್ಲಿ ಸುಗ್ರೀವಚರಿತ್ರದಂತೆ. ಪ್ರಾಸಂಗಿಕವೂ ದ್ವಿವಿಧ: ದೂರವಾಗಿ ಅನುವರ್ತಿಸುವುದು, ಏಕದೇಶದಲ್ಲಿ ಅನುವರ್ತಿ ಸುವುದು-ಎಂದು. ದೂರವಾಗಿ ಅನುವರ್ತಿಸುವುದು-ವೇಣೀಸಂಹಾರದಲ್ಲಿ ಭೀಮಚರಿತ್ರದಂತೆ. ಏಕದೇಶಾನುವರ್ತಿಯಾದುದು-ರಾಮಾಯಣದಲ್ಲಿ ಶ್ರಾವಣವೃತ್ತಾಂತ ಮುಂತಾದುದರಂತೆ. ಅವುಗಳಲ್ಲಿ ಮೊದಲನೆಯ ದಕ್ಕೆ ಪತಾಕೆ-ಎಂದು ಹೆಸರು. ಎರಡನೆಯದಕ್ಕೆ ಪ್ರಕರಿ-ಎಂದು. ಅದು

ಈ ರೀತಿ ಅಧಿಕಾರಿಕ, ಪತಾಕೆ, ಪ್ರಕರಿ-ಎಂದು ಇತಿವೃತ್ತವು ಮೂರು ಬಗೆಗಳುಳ್ಳುದು. ಇದೂ, ಪ್ರಖ್ಯಾತ, ಉತ್ಪಾದ್ಯ, ಮಿಶ್ರ-ಎಂದು ಮತ್ತೆ ಬೇರೆ ಮೂರು ಬಗೆಗಳನ್ನು ಹೊಂದಿರುವುದು. ಪ್ರಖ್ಯಾತವು-ಪುರಾಣೇತಿಹಾಸಾದಿಗಳಲ್ಲಿ ಪ್ರಸಿದ್ಧವಾದುದು. ಉತ್ಪಾದ್ಯವು— ಕವಿ ತನ್ನ ಬುದ್ಧಿಯಿಂದ ಕಲ್ಪಿಸಿದುದು. ಇವೆರಡೂ ಬೆರೆದುದು—ಮಿಶ್ರವು. ಒಟ್ಟಿನಲ್ಲಿ ಇತಿವೃತ್ತದ ಪ್ರಕಾರಗಳು ಇಂತು ಒಂಬತ್ತು. ವೃತ್ತ, ಇತಿವೃತ್ತ, ವಸ್ತು, ಚರಿತ—ಎಂದು ಇವೆಲ್ಲವೂ ಪರ್ಯಾಯಶಬ್ದಗಳು. ಅವುಗಳಲ್ಲಿ—ಪ್ರಖ್ಯಾತವೃತ್ತವು ನಾಟಕದಲ್ಲಿ. ಉತ್ಪಾದ್ಯವು ಪ್ರಕರಣದಲ್ಲಿ. ಈಹಾಮೃಗ ಮುಂತಾದುದರಲ್ಲಿ ಮಿಶ್ರವು. ಈ ಇತಿವೃತ್ತದಲ್ಲಿ ಯಾವುದನ್ನು ಉದ್ದೇಶಿಸಿ ನಾಯಕನು ಆರಂಭಿಸುವನೋ, ಯಾವುದು ನಾಯಕನಿಂದ ಅಪೇಕ್ಷಿಸಲ್ಪಡುವುದೋ ಅದು ಕಾರ್ಯವೆಂದು ಹೇಳಲ್ಪಡುವುದು. ಎಂತೆಂದರೆ—ರಾಮಾಯಣದಲ್ಲಿ ರಾವಣನ ವಧೆಯಂತೆ. ಈ ಕಾರ್ಯಕ್ಕೂ ಅಯ್ದು ಅವಸ್ಥೆಗಳು. ಮೊದಲು ಕಾರ್ಯವು ಆರಂಭಿಸಲ್ಪಡುವುದು; ಬಳಿಕ ಈ ಕಾರ್ಯದ ಸಿದ್ಧಿಗೋಸ್ಕರ ಪ್ರಯತ್ನಮಾಡಲ್ಪಡುವುದು; ಅನಂತರ ಸಿದ್ಧಿಯಾಗಬೇಕೆಂದು ಆಶೆಯುಂಟಾಗುವುದು; ಆ ಮೇಲೆ ತಪ್ಪದೆ ಕಾರ್ಯವು ಸಿದ್ಧಿಸುವುದು. ಬಳಿಕ ಈ ಕಾರ್ಯದ ದೆಸೆಯಿಂದ ಫಲಪ್ರಾಪ್ತಿಯಾಗುವುದು. ಈಯವಸ್ಥೆಗಳನ್ನೇ ಕ್ರಮವಾಗಿ ಆರಂಭ, ಯತ್ನ, ಪ್ರಾಪ್ತ್ಯಾಶೆ, ನಿಯತಾಪ್ತಿ, ಫಲಾಗಮ—ಎಂದು ವ್ಯಪದೇಶಿಸುವರು. ಈಯಯ್ದವಸ್ಥೆಗಳ ಯೋಗದಿಂದ ಇತಿವೃತ್ತಕ್ಕೆ ಅಯ್ದು ವಿಭಾಗಗಳುಂಟಾಗುವುವು. ಈ ವಿಭಾಗಗಳು ಸಂಧಿಗಳೆಂದು ಹೇಳಲ್ಪಡುವುವು. ಅವು—ಮುಖ, ಪ್ರತಿಮುಖ, ಗರ್ಭ, ಅವಮರ್ಶ, ಉಪಸಂಹೃತಿ—ಎಂದು. ಉಪಸಂಹೃತಿಸಂಧಿಯೇ ನಿರ್ವಹಣಸಂಧಿಯೆಂದು ಹೇಳಲ್ಪಡುವುದು. ಇಲ್ಲಿಪ್ರಯೋಜನಸಿದ್ಧಿಗೆ ಕಾರಣಭೂತಗಳಾದುವಯ್ದು ಉಪಕಾರಗಳಾಗಿರುವುವು. ಅವು—ಬೀಜ, ಬಿಂದು, ಪತಾಕೆ, ಪ್ರಕರಿ, ಕಾರ್ಯ—ಎಂಬುವು.

ಇವನ್ನೇ ಅರ್ಥಪ್ರಕೃತಿಗಳೆನ್ನುವರು. ಅವುಗಳಲ್ಲಿ ಪತಾಕೆ, ಪ್ರಕರಿ, ಕಾರ್ಯ ಎಂಬ ಮೂರನ್ನೂ ಮೊದಲೇ ನಿರ್ದೇಶಿಸಿರುವೆವು. ಬೀಜವೆಂಬುದು ಫಲೋತ್ಪತ್ತಿಗೆ ಮುಖ್ಯಕಾರಣ. ಇದು ಅಲ್ಪಮಾತ್ರವಾಗಿ ಉದ್ದೇಶಿಸಲ್ಪಟ್ಟು ಬಹುಪ್ರಕಾರವಾಗಿ ಹರಡುವಂತಹುದು; ಎಂತೆಂದರೆ—ವೇಣೀಸಂಹಾರದಲ್ಲಿ ಯುಧಿಷ್ಠಿರನ ಉತ್ಸಾಹದಂತೆ. ಇದು ದ್ರೌಪದಿಯ ಕೇಶಬಂಧನವಿಷಯದಲ್ಲಿ ಕಾರಣವಾದುದು. ಭೀಮಸೇನನ ಕ್ರೋಧದಿಂದ ಅಭಿವೃದ್ಧಿಗೊಂಡು ಬಹುಪ್ರಕಾರವಾಗಿ ಹರಡಿತು. ಅವಾಂತರವಾದ ಕಾರ್ಯವು ಪರಿಸಮಾಪ್ತಿಗೊಳ್ಳುವುದರಿಂದ ವಿಚ್ಛಿನ್ನವಾದಂತೆ ಭಾಸಿಸುವ ಇತಿವೃತ್ತಕ್ಕೆ ಅವಿಚ್ಛಿನ್ನತೆಯನ್ನುಂಟುಮಾಡುವುದು ಬಿಂದು; ಎಂತೆಂದರೆ—ವೇಣೀಸಂಹಾರದಲ್ಲಿ "ಸಾದೇವ! ಪೋಗುನೀಂ. ಗುರುಜನಮನನುವರ್ತಿಸು. ಆನುಮಾಯುಧಶಾಲೆಯಂ ಪೊಕ್ಕು ಆಯುಧಮಂ ಕೈಕೊಂಡಪೆಂ" ಎಂದು ಭೀಮನು ಹೇಳಿದುದಕ್ಕೆ "ಆರ್ಯ! ಇದಾಯುಧಶಾಲೆಯಲ್ತು; ದೇವಿಯನೆಲೆವೀಡಿದು" ಎಂದು ಸಹದೇವನು ಮರುನುಡಿಯನ್ನು ನುಡಿಯಲು, ಆನೀದೇವಿಯುಂಕಂಡು ಅಱಿಪಲೇವೇೞ್ಕುಂ—ಎಂದು ಭೀಮನು ಹೇಳುವನು. ಇಲ್ಲಿ ಅವಾಂತರಭೂತವಾದ ಆಯುಧಗ್ರಹಣಕಾರ್ಯವು ಪರಿಸಮಾಪ್ತಿಗೊಂಡುದರಿಂದ ವಿಚ್ಛಿತ್ತಿಹೊಂದಿದಂತೆ ತೋರುವ ಇತಿವೃತ್ತವು ಮತ್ತೆ ಅವಿಚ್ಛಿತ್ತಿಹೊಂದಿಸಲ್ಪಟ್ಟುದರಿಂದ ಇದು ಬಿಂದುವೆನಿಸುವುದು.

ಈಯಿತಿವೃತ್ತವು ಇಂತು ಅಯ್ದು ಪ್ರಕಾರಗಳಿಂದ ಭಿನ್ನವಾಗಿದ್ದರೂ ಅಭಿನಯಮುಖದಿಂದ ಎಲ್ಲವನ್ನೂ ಸಾಮಾಜಿಕರಿಗೆ ತೋರಿಸಲು ಆಗುವುದಿಲ್ಲ. ಇದರಲ್ಲಿ ಸ್ವಾರಸ್ಯವುಳ್ಳ ಕಥಾಂಶವು ಮಾತ್ರ ಅಭಿನಯಿಸಲ್ಪಡುವುದು. ನೀರಸವೂ ತೋರಿಸಲಾಗದುದೂ ಸೂಚನಮಾತ್ರದಿಂದ ತಿಳಿಯಿಸಲ್ಪಡುವುದು. ಪ್ರಯೋಗದರ್ಶನದಿಂದ ರಸಜ್ಞರ ಮನಸ್ಸು ಎಂತು ಉದ್ವೇಗವನ್ನು ಹೊಂದದಿರುವುದೋ ಅಂತು ರೂಪಕವನ್ನು

ರಚಿಸಬೇಕು. ಪ್ರೇಕ್ಷಕರು ರಸವನ್ನು ಆಸ್ವಾದಿಸುತಿರುವಾಗ ನಡುವೆ ವಿಘ್ನವುಂಟಾಗದಂತಿರಬೇಕು. ಈರೀತಿ ಸಂಸ್ಕೃತನಾಟಕದ ರಚನೆ ಯಲ್ಲಿ ನಿಯಮವಿರುವುದು.

ರೂಪಕದಲ್ಲಿ ಒಂದುಕಡೆ ಅಂಕದ ಮೊದಲಲ್ಲಿ ಒಂದು ಮಧ್ಯಮ ಪಾತ್ರದಿಂದಲೋ ಅಥವಾ ಎರಡು ಮಧ್ಯಮಪಾತ್ರಗಳಿಂದಲೋ ಅಥವಾ ಎರಡು ಮಧ್ಯಮನೀಚಪಾತ್ರಗಳಿಂದಲೋ, ಹಿಂದೆ ನಡೆದ ಮತ್ತು ಮುಂದೆ ನಡೆಯುವ ಕಥಾಂಶವು ಸೂಚಿಸಲ್ಪಟ್ಟರೆ, ಅದು— ವಿಷ್ಕಂಭಕವೆಂದು ಹೇಳಲ್ಪಡುವುದು. ನೀಚಪಾತ್ರದಿಂದ ಅಥವಾ ಎರಡು ನೀಚಪಾತ್ರಗಳಿಂದ ಸೂಚಿಸಲ್ಪಟ್ಟರೆ, ಪ್ರವೇಶಕವೆಂದು ಹೇಳ ಲ್ಪಡುವುದು. ಇದು ಎರಡಂಕಗಳ ಮಧ್ಯದಲ್ಲಿ ಬರುವುದು; ಅದ ರಿಂದ ಈ ಪ್ರವೇಶಕವನ್ನು ಮೊದಲಂಕದಲ್ಲಿ ಇಡಬಾರದು. ಎಲ್ಲಿ ಉತ್ತ ರಾಂಕದ ಅರ್ಥವು ಪೂರ್ವಾಂಕದ ಅರ್ಥದೊಡನೆ ಕೂಡಿ ಅಂಕಪಾತ ಸೂಚನೆಯಿಲ್ಲದಿರುವುದೋ ಅದು ಅಂಕಾವತಾರ. ಒಂದೇ ಅಂಕದಲ್ಲಿ ಎಲ್ಲಾ ಅಂಕಗಳ ಅರ್ಥವೂ ಸೂಚಿಸಲ್ಪಟ್ಟರೆ ಅದು ಅಂಕಮುಖ. ಪಾತ್ರಗಳು ತೆರೆಯೊಳಗೆ ಮರೆಯಾಗಿದ್ದು ಮಾಡುವ ಅರ್ಥಸೂಚನೆಯು ಚೂಲಿಕೆ. ಇದು ವಿಷ್ಕಂಭಾದಿಗಳಂತೆ ಮೊದಲಲ್ಲಿ ಸೇರಿಸಲ್ಪಡುವುದು. ಇತಿವೃತ್ತದಲ್ಲಿಯೂ ರಸಕ್ಕಾಗಲಿ ನಾಯಕನಿಗಾಗಲಿ ಯಾವುದು ಅನು ಚಿತವೆನಿಸುವುದೋ ಅದನ್ನು ಸರ್ವಪ್ರಕಾರಗಳಿಂದಲೂ ಪರಿತ್ಯಜಿಸ ಬೇಕು. ಅಲ್ಲದಿದ್ದರೆ ಬೇರೆ ರೀತಿಯಲ್ಲಾದರೂ ಕಲ್ಪಿಸಬೇಕು— ಎಂಬುದು ನಾಟ್ಯಜ್ಞರ ಸಿದ್ಧಾಂತವು. ಎಂತೆಂದರೆ—ಉದಾತ್ತರಾಘವ ದಲ್ಲಿ ರಾಮನಿಂದ ಮಾಡಲ್ಪಟ್ಟ ವಾಲಿಯ ವಧೆಯು ಅಂಗೀಕೃತವಲ್ಲ. ಸುಗ್ರೀವಚರಿತ್ರದಲ್ಲಿಯೂ ಬೇರೆ ರೀತಿ ವರ್ಣಿಸಲ್ಪಟ್ಟಿರುವುದು. ಕಾವ್ಯ ಗಳು ರಸಮಾತ್ರಪ್ರಧಾನಗಳಲ್ಲದೆ ಕೇವಲ ಪೂರ್ವಕಥಾಪ್ರಧಾನಗಳಲ್ಲವೇ ಅಲ್ಲ. ಇದೇ ಕಾವ್ಯಕ್ಕೂ ಇತಿಹಾಸಕ್ಕೂ ಇರುವ ಭೇದವು.

ಸಾಮಾನ್ಯವಾಗಿ ಪ್ರೇಕ್ಷಕನು ವಿಷಯಗಳನ್ನು ಅರಿಯದವನಾಗಿರುವಾಗ ಪಾತ್ರಗಳು ಒಟ್ಟಿಗೆ ಪ್ರವೇಶಿಸಲು ಆ ಸಂಬಂಧವನ್ನು ತಿಳಿಯದೆ ರಸಾಸ್ವಾದಕ್ಕೆ ವಿಘ್ನಬಂದುದರಿಂದ ಆಕುಲತೆಗೊಳ್ಳುವನು. ಈಪಾತ್ರವಾವುದು? ಇದರ ಸಂಬಂಧವೇನು-ಎಂಬುದನ್ನು ಪ್ರೇಕ್ಷಕನು ವಿಚಾರ ಮಾಡುವುದರೊಳಗೆ ರಸಾಸ್ವಾದಕ್ಕೆ ಭಂಗವುಂಟಾಗುವುದು. ಆದುದರಿಂದಲೇ ಸಂಸ್ಕೃತರೂಪಕದಲ್ಲಿ ಸೂಚನೆಯಿಲ್ಲದೆ ಪಾತ್ರಪ್ರವೇಶವಿಲ್ಲ. ಇದಕ್ಕೋಸ್ಕರವೇ ನಾಟಕದ ಮೊದಲಲ್ಲಿ ಪ್ರಸ್ತಾವನೆಯನ್ನು ಇಟ್ಟುಕೊಂಡಿರುವುದು. ವಿದೇಶದವರ ನಾಟಕಗಳಲ್ಲಿ ಈ ಪ್ರಚಾರವು ಕಾಣುವುದಿಲ್ಲ. ಆದುದರಿಂದಲೇ ಪ್ರಸ್ತಾವನೆಯಿಲ್ಲದೆಯೆ ಪಾತ್ರಗಳು ಪ್ರವೇಶಿಸಿ, ಸಂಬಂಧವನ್ನು ಅರಿಯದ ಪ್ರೇಕ್ಷಕರ ಹೃದಯವನ್ನು ಆಕುಲತೆಗೊಳಿಸುವುವು.

ಲಜ್ಜೆ ಮುಂತಾದುದನ್ನು ಉಂಟುಮಾಡುವ ಇತರ ಕಥಾಂಶಗಳೂ ಭಾರತೀಯರ ಸಂಸ್ಕೃತನಾಟಕಗಳಲ್ಲಿ ಪ್ರಯೋಗಿಸಲ್ಪಡುವುದಿಲ್ಲ.

ಈ ರೀತಿ ಇಂತಹ ಇತಿವೃತ್ತಗಳಿಂದಲೂ ರಸಗಳಿಂದಲೂ ನಾಯಕಾದಿಗಳಿಂದಲೂ ಉದ್ಭಾಸಿತವಾಗಿ ಅಭಿನಯಿಸಲ್ಪಡುವ ದೃಶ್ಯಕಾವ್ಯವಾವುದೋ ಅದು ರೂಪಕವೆಂದು ಹೇಳಲ್ಪಡುವುದು.

ಕೇವಲ ಮನೋವಿನೋದಮಾತ್ರವೇ ಸಂಸ್ಕೃತನಾಟಕರಚನೆಗೆ ಪ್ರಯೋಜನವಲ್ಲ ಇದಕ್ಕಿಂತಲೂ ಉದಾತ್ತತರವಾದ ಬೇರೆ ಪ್ರಯೋಜನವುಂಟು. ತಿಳಿಯಬೇಕೆಂದು ಆಪೇಕ್ಷಿಸುವರು ಅದನ್ನು ನಾಟ್ಯಶಾಸ್ತ್ರದಲ್ಲಿ ಬ್ರಹ್ಮನು ಹೇಳಿರುವ ಮಾತುಗಳಿಂದ ತಿಳಿಯಬಹುದು. ಅದೇಂತೆಂದರೆ— ಈ ಮೂರು ಲೋಕಗಳ ಭಾವಗಳನ್ನು ಅನುವರ್ತಿಸುವುದು ನಾಟ್ಯವೆನಿಸುವುದು. ಬಗೆಬಗೆಯ ಭಾವಗಳಿಂದ ಕೂಡಿದುದೂ ಬಗೆವಗೆಯ ಅವಸ್ಥಾಂತರಗಳ ಸ್ವರೂಪವೂ ಲೋಕಚರಿತ್ರಗಳ ಅನುಕರ

ಣವೂ ಆದ ಈ ನಾಟ್ಯವನ್ನು ನಾನು ರಚಿಸಿದೆನು. ಇದು ಉತ್ತಮ ಮಧ್ಯಮಾಧಮರಾದ ನರರ ಕರ್ಮಗಳಿಗೆ ಆಶ್ರಯವಾಗಿರುವುದು. ಹಿತೋಪದೇಶವನ್ನು ಮಾಡುವುದು. ಧೈರ್ಯವನ್ನೂ ಕ್ರೀಡಾ ಸುಖಾದಿಗಳನ್ನೂ ಉಂಟುಮಾಡುವುದು. ದುಃಖಾರ್ತರೂ ಸಮರ್ಥರೂ ತಪಸ್ವಿಗಳೂ ಆದವರಿಗೆ ಕಾಲದಲ್ಲಿ ವಿಶ್ರಾಂತಿಸಂಪಾದಕವಾದುದು. ಇಂತಹ ಈ ನಾಟ್ಯವನ್ನು ನಾನು ರಚಿಸಿರುವೆನು. ಈ ನಾಟ್ಯವು ಧರ್ಮವನ್ನೂ ಯಶಸ್ಸನ್ನೂ ಆಯುಸ್ಸನ್ನೂ ಹೆಚ್ಚಿಸುವಂತಹುದೂ ಹಿತಕರವೂ ಬುದ್ಧಿಶಕ್ತಿಯನ್ನು ಅಭಿವೃದ್ಧಿಗೊಳಿಸುವುದೂ ಲೋಕಕ್ಕೆ ಉಪದೇಶಕವೂ ಆಗಿರುವುದು. ನಾಟಕದಲ್ಲಿ ಯಾವುದು ಕಾಣಲ್ಪಡುವುದಿಲ್ಲವೋ ಅದು ಶಾಸ್ತ್ರವಲ್ಲ; ಅದು ಶಿಲ್ಪವಲ್ಲ; ಅದು ವಿದ್ಯೆಯಲ್ಲ; ಅದು ಕಲೆಯಲ್ಲ; ಅದು ಯೋಗವಲ್ಲ; ಅದು ಕರ್ಮವಲ್ಲ; ಸುಖದುಃಖಗಳಿಂದ ಕೂಡಿದ ಲೋಕಸ್ವಭಾವವು ಯಾವುದೋ ಅಂಗಾದ್ಯಭಿನಯಗಳಿಂದ ಕೂಡಿದ ಅದು ನಾಟ್ಯವೆಂದು ಹೇಳಲ್ಪಡುವುದು—ಎಂದು.

ಆದುದರಿಂದಲ್ಲವೆ ರಸಿಕರು ಪ್ರಾಚೀನರೂಪಕಗಳ ಮಾಹಾತ್ಮ್ಯವನ್ನು ತಿಳಿಯಲು ಸಾಧ್ಯವಾಗಿರುವುದು. ಈ ಭಾರತವರ್ಷದಲ್ಲಿ ಈ ನಾಟ್ಯವಿದ್ಯೆಯು ಬಹು ಪ್ರಾಚೀನವಾದುದು. ರೂಪಕಾಭಿನಯವು ಚೆನ್ನಾಗಿ ನೇರ್ಪಡಲು ಭಾರತವರ್ಷೀಯರು ಬಹುವಾಗಿ ಪ್ರವರ್ತಿಸಿರುವರು. ನಾಟ್ಯಶಾಸ್ತ್ರದಲ್ಲಿ ಕಾಣಲ್ಪಡುವ ಭಾರತೀಯರ ಅಭಿನಯವಿಧಿಯೂ ಜಿಜ್ಞಾಸುಗಳ ಹೃದಯಗಳನ್ನು ಅಚ್ಚರಿಗೊಳಿಸುವುವು. ಇದರಲ್ಲಿ ಅಭಿನಯೋಪಯುಕ್ತಗಳಾದ ಕರಚರಣಾದಿಗಳ ಪ್ರಕಾರಗಳೂ ಬಹು ವಿಧಗಳಾಗಿ ಬಣ್ಣಿಸಲ್ಪಟ್ಟಿರುವುವು. ಪಾತ್ರಗಳ ವೇಷ ಮುಂತಾದುದರ ವಿಷಯದಲ್ಲಿಯೂ ಹಿಂದಣ ಭಾರತೀಯರ ಸಂಸ್ಕಾರವು ಚೆನ್ನಾಗಿಯೇ ಇದ್ದಿತು. ನಾಟ್ಯಶಾಸ್ತ್ರದಲ್ಲಿ ಕಾಣುತಿರುವ ಪ್ರಾಚೀನರ ನಾಟ್ಯಶಾಲಾದಿ ವ್ಯವಸ್ಥೆಯೂ ಹೃದಯಂಗಮಗಳಾದ ದೃಶ್ಯಗಳ ನಿರ್ಮಾಣಚಾತುರ್ಯವೂ

ಈಗಿನವರ ಗರ್ವವನ್ನು ಸರ್ವಥಾ ಭಂಗಗೊಳಿಸದೆ ಇರದು. ಇದರಿಂದ ನಮಗೆ ವಿಶ್ವಾಸವು ಹೆಚ್ಚು. ಒಟ್ಟನಲ್ಲಿ ಈ ನಾಟ್ಯವಿದ್ಯೆಯು ಪೂರ್ವದಲ್ಲಿ ಉತ್ತಮವಾದ ಸಮುನ್ನತಿಯನ್ನೇ ಪಡೆದಿದ್ದಿತು. ಯಾರು ಈ ನಾಟ್ಯವಿದ್ಯೆಯ ಅಭ್ಯುಚ್ಚಯವುಳ್ಳ ಸ್ವರೂಪವನ್ನು ತಿಳಿಯಲಪೇಕ್ಷಿಸುವರೋ ಅವರು ಭರತಪ್ರಣೀತವಾದ ನಾಟ್ಯಶಾಸ್ತ್ರವನ್ನು ಒಂದಾವೃತ್ತಿಯಾದರೂ ಆಮೂಲಾಗ್ರವಾಗಿ ಚೆನ್ನಾಗಿ ಅವಲೋಕಿಸಲೆಂದು ನಾವು ಅಭ್ಯರ್ಥಿಸುವೆವು.

ಈ ರೀತಿಯಲ್ಲಿ ಸಾಮಾನ್ಯವಾಗಿ ರೂಪಕಗಳ ಸ್ವರೂಪವನ್ನು ನಿರೂಪಿಸಿದುದಾಯಿತು. ಮೊದಲಲ್ಲಿ ಬ್ರಹ್ಮನ ಅಪ್ಪಣೆಯಿಂದ ಭರತಮುನಿಯು ಮಹೇಂದ್ರನ ಧ್ವಜಮಹೋತ್ಸವದಲ್ಲಿ ದೇವತೆಗಳಿಂದ ದೈತ್ಯರಿಗೆ ಉಂಟಾದ ಪರಾಜಯವನ್ನು ಅಧಿಕರಿಸಿ ವಿರಚಿಸಿದ ರೂಪಕವು ಭಾರತವರ್ಷದಲ್ಲಿ ಅಭಿನಯಿಸಲ್ಪಟ್ಟಿತು. ಆಮೇಲೆ ಈ ರೂಪಕಾಭಿನಯ ಪ್ರಚಾರವು ಉಂಟಾಯಿತು. ಈ ರೂಪಕಗಳಲ್ಲಿ ನಾಟಕವೇ ಪ್ರಧಾನವಾದುದರಿಂದ ಅದಕ್ಕೇ ಮೊದಲ ನಿರ್ದೇಶವು ಎಲ್ಲೆಲ್ಲಿಯೂ ಉಪಲಬ್ಧವಾಗಿರುವುದು.

ನಾಟಕಸ್ವರೂಪವು ಸಾಹಿತ್ಯದರ್ಪಣದಲ್ಲಿ ವಿಶೇಷವಾಗಿ ಹೇಳಲ್ಪಟ್ಟಿರುವುದು. ಭಟ್ಟನಾರಾಯಣಕವಿಯೂ ನಾಟಕವನ್ನೇ ರಚಿಸಿರುವನು.

**ವೇಣೀಸಂಹಾರ—**

ಮಹಾಭಾರತ ಕಥೆಯನ್ನು ಆಶ್ರಯಿಸಿ ಈ ನಾಟಕವು ಕವಿಯಿಂದ ರಚಿಸಲ್ಪಟ್ಟಿರುವುದು. ಇದರಲ್ಲಿ ಪಾಂಡವರ ಅಜ್ಞಾತವಾಸ ಮುಗಿದ ಬಳಿಕ ಯುಧಿಷ್ಠಿರ ರಾಜ್ಯಾಭಿಷೇಕದ ವರೆಗೆ ಪ್ರಖ್ಯಾತವಾದ ಕಥಾಂಶವು ಸಂಗೃಹೀತವಾಗಿರುವುದು. ಈ ಕಥಾಭಾಗವು ಆರು ಅಂಕಗಳಲ್ಲಿ ಅಡಗಿದೆ.

ಮೊದಲನೆಯ ಅಂಕದಲ್ಲಿ—

ಅಜ್ಞಾತವಾಸವನ್ನು ಪೂರಯಿಸಿದ ಯುಧಿಷ್ಠಿರ ಮಹಾರಾಜನು ಸಂಧಿಗೋಸ್ಕರ ಶ್ರೀಕೃಷ್ಣನನ್ನು ದುರ್ಯೋಧನನ ಬಳಿಗೆ ಕಳುಹಿಸಿದನೆಂದು ಮೊದಲಲ್ಲಿ ಸೂಚಿತವಾಗಿರುವುದು. ಸಂಧಿವಿಚಾರವನ್ನು ಕೇಳಿ ಕುಪಿತನಾದ ಭೀಮಸೇನನು ಸಹದೇವನೊಡನೆ ಪ್ರವೇಶಿಸುವುದು, ಭೀಮಸೇನನಿಗೆ ಸಂಧಿಯು ರುಚಿಸದಿರುವುದು, ದ್ರೌಪದಿಯ ಪ್ರವೇಶ, ಅವಳಿಗೆ ಉಂಟಾದ ಅಪಮಾನವನ್ನು ಕೇಳಿದುದರಿಂದ ಭೀಮನಿಗೆ ಮತ್ತಷ್ಟು ಕ್ರೋಧ ಹೆಚ್ಚುವುದು, ದುರ್ಯೋಧನನು ಸಂಧಿಯನ್ನು ತಿರಸ್ಕರಿಸಿದುದರಿಂದ ಯುಧಿಷ್ಠಿರನ ಯುದ್ಧನಿಶ್ಚಯ—ಎಂಬ ಅರ್ಥಗಳು ಪ್ರದರ್ಶಿಸಲ್ಪಟ್ಟಿರುವುವು.

ಎರಡನೆಯ ಅಂಕದಲ್ಲಿ—

ಕಂಚುಕಿ ಪ್ರವೇಶಿಸಿ, ಪರಸೇವಾಜೀವನವು ಕಷ್ಟಕರವೆಂದು ಜರೆಯುತ್ತ, ಭೀಷ್ಮರ ಶರತಲ್ಪ ಶಯನವನ್ನೂ ಅಭಿಮನ್ಯು ಸಂಹಾರವನ್ನೂ ವರ್ಣಿಸುವುದು, ದುರ್ಯೋಧನನ ಮಡದಿ ಭಾನುಮತಿ ಕನಸಿನಲ್ಲಿ ನಕುಲಕೃತವಾದ ಸರ್ಪಶತ ಖಂಡನವನ್ನು ಕಂಡುದು, ಪತಿಗೆ ವಿಜಯವಾಗಲೆಂದು ಆಕೆ ವ್ರತವನ್ನು ಆಚರಿಸಿದುದು, ಅದರಲ್ಲಿ ದುರ್ಯೋಧನನಿಗೆ ಉಂಟಾದ ಅನಾದರ, ಈ ಸಮಯದಲ್ಲಿ ಅವನಿಗೆ ಭಾನುಮತೀ ಸಮಾಗಮೇಚ್ಛೆ, ತತ್ಕಾಲದಲ್ಲಿ ಥಟ್ಟನೆ ಉಂಟಾದ ಪ್ರಚಂಡತರ ವಾಯುವಿನ ಸಂರಂಭದಿಂದ ಹೆದರಿದ ಭಾನುಮತಿಯ ವ್ರತಭಂಗ, ಜಯದ್ರಥನ ತಾಯೂ ಮಡದಿಯೂ ಬಂದು, ಅರ್ಜುನನು ಜಯದ್ರಥನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿರುವನೆಂಬುದನ್ನು ದುರ್ಯೋಧನನ ಮುಂದೆ ಹೇಳಿಕೊಳ್ಳುವುದು, ಅದನ್ನು ಕೇಳಿ ದುರ್ಯೋಧನನು ಅಲಕ್ಷ್ಯಭಾವದಿಂದ ಅನಾದರಣೆ ಮಾಡುವುದು, ಯುದ್ಧಕ್ಕೆ ತೆರಳುವುದು—ಎಂಬ ಅರ್ಥಗಳು ಹೇಳಲ್ಪಟ್ಟಿವೆ.

ಮೂರನೆಯಂಕದಲ್ಲಿ—

ರಾಕ್ಷಸೀರಾಕ್ಷಸರ ಸಂಲಾಪಮುಖದಿಂದ ಅನೇಕ ವೀರರ ವಧೆಯು ತಿಳಿಯಿಸಲ್ಪಡುವುದು. ದ್ರೋಣಸಂಹಾರವೂ ಸೂಚಿಸಲ್ಪಡುವುದು. ದ್ರೋಣಾಧಿಷ್ಠಿತಗಳಾದ ಸೇನೆಗಳ ಪಲಾಯನದಿಂದ ಆಶ್ಚರ್ಯಗೊಂಡ ಅಶ್ವತ್ಥಾಮನ ಪ್ರವೇಶ, ದ್ರೋಣಸಾರಥಿಯು ಪ್ರವೇಶಿಸಿ ದ್ರೋಣನ ವಧೆಯನ್ನು ಅಶ್ವತ್ಥಾಮನಿಗೆ ತಿಳಿಯಿಸುವುದು, ಕೃಪಾಚಾರ್ಯನು ಈತನ ಬಳಿಗೆ ಬರುವುದು, ಪಾಂಡವರನ್ನು ನಿರ್ಮೂಲ ಮಾಡಬೇಕೆಂಬುದರಲ್ಲಿ ಅಶ್ವತ್ಥಾಮನ ಉತ್ಸಾಹ, ಅದಕ್ಕೋಸ್ಕರ ಅಶ್ವತ್ಥಾಮನನ್ನು ಸೇನಾಧಿಪತ್ಯದಲ್ಲಿ ಅಭಿಷೇಚಿಸಬೇಕೆಂದು ಕೃಪಾಚಾರ್ಯನು ದುರ್ಯೋಧನನ ಬಳಿಗೆ ಕರೆದುಕೊಂಡು ಹೋಗುವುದು, ಕುಟಿಲಾತ್ಮನಾದ ಕರ್ಣನ ಮಂತ್ರಣದಿಂದ ದುರ್ಯೋಧನನು ದ್ರೋಣವಿರಚಿತವಾದುದೆಲ್ಲವನ್ನೂ ಅನ್ಯಥಾ ಗ್ರಹಿಸುವುದು, ಅಶ್ವತ್ಥಾಮನ ಸೇನಾಧಿಪತಿತ್ವಾಭಿಷೇಕದಲ್ಲಿ ದುರ್ಯೋಧನನ ತಿರಸ್ಕಾರ, ಕರ್ಣಾಶ್ವತ್ಥಾಮರ ಕಲಹ, ಸಮೀಪದಲ್ಲಿರುವ ದುಶ್ಶಾಸನನನ್ನು ನೋಡಿ ಅವನ ರಕ್ತವನ್ನು ಹೀರುವುದಕ್ಕೆ ಭೀಮನನ್ನು ಕರೆಯುವುದು. ದುಶ್ಶಾಸನನನ್ನು ರಕ್ಷಿಸುವುದಕ್ಕೆ ಕರ್ಣದುರ್ಯೋಧನಾದಿಗಳು ತೆರಳುವುದು.—ಎಂಬ ಅರ್ಥಗಳೂ ಸೇರಿಸಲ್ಪಟ್ಟಿರುವುವು. ಪ್ರಾಚೀನರಾದ ವಿದ್ವಾಂಸರು ಈಯಂಕವನ್ನು ಅಶ್ವತ್ಥಾಮಾಂಕವೆನ್ನುವರು.

ನಾಲ್ಕನೆಯಂಕದಲ್ಲಿ—

ಪ್ರಹಾರಮೂರ್ಛಿತನಾಗಿ ರಥದಲ್ಲಿದ್ದ ದುರ್ಯೋಧನನನ್ನು ಸಾರಥಿಯು ಬೇರೆಡೆಗುಯ್ಯುವುದು, ದುರ್ಯೋಧನನು ಎಚ್ಚರಗೊಂಡು ದುಶ್ಶಾಸನನ ರಕ್ಷಣೆಗೋಸ್ಕರ ಯುದ್ಧಕ್ಕೆ ತ್ವರೆಪಡುತ್ತಿರಲು, ಭೀಮನು ದುಶ್ಶಾಸನನನ್ನು ಕೊಂದಿಕ್ಕಿದನೆಂದು ತಿಳಿಯಿಸುವುದು, ರಣರಂಗದಿಂದ ಬಂದ ಸುಂದರಕನ ಸಂದರ್ಶನ. ಅವನು ರಣವೃತ್ತಾಂತವನ್ನು ಅರಿಕೆಮಾಡು

ವುದು, ಅದರಲ್ಲಿ—ಭೀಮಕರ್ಣರ ಯುದ್ಧ, ಕರ್ಣಪುತ್ರನಾದ ವೃಷ ಸೇನನನ್ನು ಯುದ್ಧದಲ್ಲಿ ಅರ್ಜುನನು ಕೊಲ್ಲುವುದು, ಭಗ್ನರಥನಾದ ಕರ್ಣನು ಬೇರೊಂದು ರಥವನ್ನು ಹತ್ತಿ ಯುದ್ಧಕ್ಕೆ ತೆರಳುವುದು, ತೆರಳುವಾಗ ದುರ್ಯೋಧನನಿಗೋಸ್ಕರ ಸಂದೇಶವನ್ನು ಕಳುಹುವುದು ; ಆಮೇಲೆ ದುರ್ಯೋಧನನ ಮಾತಾಪಿತೃಗಳಾದ ಗಾಂಧಾರೀಧೃತ ರಾಷ್ಟ್ರರು ಅವನನ್ನು ನೋಡಲು ಬಂದುದನ್ನು ಸೂಚಿಸುವುದು— ಎಂಬೀವಿಷಯುಗಳು ಒಳಕೊಂಡಿವೆ. ಈಯಂಕವು ಸುಂದರಕಾಂಕವೆಂದು ಸಾಹಿತ್ಯದರ್ಪಣಾದಿಗಳಲ್ಲಿ ಹೇಳಲ್ಪಟ್ಟಿರುವುದು.

ಅಯ್ದನೆಯಂಕದಲ್ಲಿ—

ದುರ್ಯೋಧನನು ತಾಯ್ತಂದೆಗಳನ್ನು ಕಾಣುವುದು, ಈಗಲೂ ಯುಧಿಷ್ಠಿರನೊಡನೆ ಸಂಧಿಮಾಡಿಕೊಳ್ಳೆಂದು ಅವರು ಮಾಡಿದ ಉಪದೇಶವನ್ನು ದುರ್ಯೋಧನನು ತಿರಸ್ಕರಿಸುವುದು, ಕರ್ಣನ ವಧೆ ಯನ್ನು ಕೇಳುವುದು, ಬಳಿಕ ದುರ್ಯೋಧನನು ಕ್ರೋಧಗೊಂಡು, ಅರ್ಜು ನನನ್ನು ಸಂಹರಿಸುವೆನೆಂದು ನಿಶ್ಚಯಿಸುವುದು, ಈಗ ಶಲ್ಯನನ್ನಾಗಲಿ ಅಶ್ವತ್ಥಾಮನನ್ನಾಗಲಿ ಸೇನಾಪತಿಯನ್ನಾಗಿ ಮಾಡೆಂದು ಧೃತರಾಷ್ಟ್ರನು ಹೇಳಿದುದನ್ನು ದುರ್ಯೋಧನನು ಅಂಗೀಕರಿಸದಿರುವುದು, ಭೀಮಾರ್ಜು ನರಿಬ್ಬರೂ ಅಲ್ಲಿಗೇ ಬರುವುದು, ದುರ್ಯೋಧನನೊಡನೆ ಇವರಿಬ್ಬರಿಗೂ ಮಾತುಗಳು, ಯುಧಿಷ್ಠಿರನ ಅಪ್ಪಣೆಯನ್ನು ಕೇಳಿ ಬಳಿಕ ಇವರಿಬ್ಬರೂ ಹಿಂದಿರುಗುವುದು, ಕುಪಿತನಾದ ಅಶ್ವತ್ಥಾಮನು ದುರ್ಯೋಧನನ ಸಮೀ ಪಕ್ಕೆ ಬರುವುದು, ಯುದ್ಧಮಾಡಲು ಮನಗೊಂಡ ಅಶ್ವತ್ಥಾಮನನ್ನು ಕರ್ಣಪಕ್ಷಪಾತಿಯಾದ ದುರ್ಯೋಧನನು ಮಾಕರಿಸುವುದು, ಧೃತರಾ ಷ್ಟ್ರನು ಅಶ್ವತ್ಥಾಮನಿಗೆ ಸಂದೇಶವನ್ನು ಹೇಳಿಕಳುಹುವುದು—ಎಂಬ ರ್ಥಗಳು ಪ್ರತಿಪಾದಿತಗಳಾಗಿವೆ.

ಆರನೆಯಂಕದಲ್ಲಿ—

ದ್ರೌಪದಿಯೊಡನೆ ಪ್ರವೇಶಿಸಿದ ಯುಧಿಷ್ಠಿರಮಹಾರಾಜನ ಮುಂದೆ ಪಾಂಚಲಕನೆಂಬ ದೂತನು ಬಂದು—ನೀರೊಳಗೆ ಮುಳುಗಿದ ದುರ್ಯೋಧನನನ್ನು ಶ್ರೀಕೃಷ್ಣಭೀಮಾರ್ಜುನರು ಹುಡುಕಿದುದು, ವನಚರನಾದ ಪುರುಷನ ಮಾತಿನಿಂದ ದುರ್ಯೋಧನನ ಹಜ್ಜೆಸಾಲ ಕುರಿಪುಗಳನ್ನು ಅರಿತು, ದುರ್ಯೋಧನನು ಸರೋವರದ ನೀರೊಳಗೆ ಅಡಗಿರುವನೆಂಬುದನ್ನು ನಿಶ್ಚಯಿಸುವುದು, ಭೀಮಸೇನನು ಸರೋವರದ ನೀರನ್ನು ಕಲಕಿ ಕದಡಿದುದು, ದುರ್ಯೋಧನನು ಹೊರಗೆ ಬಂದು ಭೀಮನೊಡನೆ ಯುದ್ಧಮಾಡುತ್ತಿರುವುದು—ಎಂಬರ್ಥಗಳನ್ನು ತಿಳಿಯಿಸುವುದು, ದುರ್ಯೋಧನನ ಸ್ನೇಹಿತನಾದ ಚಾರ್ವಾಕನೆಂಬ ರಾಕ್ಷಸನು ಮುನಿವೇಷಪ್ರಚ್ಛನ್ನನಾಗಿ ತನಗೆ ಹೆಚ್ಚಾಗಿ ಬಾಯಾರಿಕೆಯೆಂದು ಅಭಿನಯಿಸುತ್ತ ಪ್ರವೇಶಿಸುವುದು, ದುರ್ಯೋಧನನಿಂದ ಭೀಮನು ಕೊಲ್ಲಲ್ಪಟ್ಟನೆಂದೂ ಅರ್ಜುನನು ದುರ್ಯೋಧನನೊಡನೆ ಗದಾಯುದ್ಧವನ್ನು ಮಾಡಲು ಪ್ರವರ್ತಿಸಿರುವನೆಂದೂ ಆ ಚಾರ್ವಾಕನು ತಿಳಿಯಿಸುವುದು, ಬಳಿಕ ದ್ರೌಪದೀ ಯುಧಿಷ್ಠಿರರು ಭಗ್ನಮನೋರಥರಾಗಿ ತಾವು ಇನ್ನು ಬದುಕಿರುವುದು ವ್ಯರ್ಥವೆಂದು ಬಗೆದು ಚಿತಿಯನ್ನು ಪ್ರವೇಶಿಸಬೇಕೆಂದು ನಿಶ್ಚಯಿಸುವುದು, ಮೃತನಾಗಿರುವನೆಂದು ಸಂಭಾವಿಸಲ್ಪಟ್ಟ ಭೀಮನಿಗೋಸ್ಕರ ಜಲಾಂಜಲಿಯನ್ನು ಕೊಟ್ಟು ಯುಧಿಷ್ಠಿರನು ಪ್ರಜ್ವಲಿತವಾದ ಚಿತಿಯನ್ನು ಪ್ರವೇಶಿಸಲು ಉದ್ಯುಕ್ತನಾಗಿರಲು, ವೈರಿಯೆಲ್ಲವೂ ಹಗೆಯ ರಕುತದಿಂದ ಅವಲಿಪ್ತವಾಗಿರುವ ಕಾರಣ ಅರಿಯಲಶಕ್ಯನಾದ ಭೀಮನ ಪ್ರವೇಶ, ಇವನು ದುರ್ಯೋಧನನೆಂದು ಯುಧಿಷ್ಠಿರನಿಗೆ ಸಂಭಾವನೆ, ಕಡೆಗೆ ಭೀಮನೆಂದು ನಿಶ್ಚಯಿಸುವಿಕೆ, ಭೀಮನು ದುಶ್ಶಾಸನನ ರಕ್ತದಿಂದ ವ್ಯಾಪ್ತಗಳಾದ ಕೈಗಳಿಂದ ದ್ರೌಪದಿಯ ಜಡೆಯನ್ನು ಕಟ್ಟುವುದು, ಬಳಿಕ ಶ್ರೀಕೃಷ್ಣಾರ್ಜುನರು ಬಳಿಗೆ ಬರುವುದು, ಉಪಸಂಹಾರ—ಎಂಬೀಯರ್ಥಗಳು ವರ್ಣಿಸಲ್ಪಟ್ಟಿವೆ.

ಈ ಇತಿವೃತ್ತವು ಆಯ್ದು ಸಂಧಿಗಳಿಂದ ವಿಚ್ಛಿತ್ತಿಗೊಂಡಿರುವುದು. ಅವುಗಳಲ್ಲಿ ಮೊದಲನೆಯಂಕದಲ್ಲಿ—ಬೀಜಭೂತವಾದ ಯುಧಿಷ್ಠಿರನ ಉತ್ಸಾಹವು ಉತ್ಪನ್ನವಾಯಿತೆಂಬುದರಿಂದ ಮುಖಸಂಧಿ. ಎರಡನೆಯಂಕದಲ್ಲಿ—ಭೀಷ್ಮಾದಿಗಳ ವಧೆಯಿಂದ ಸ್ವಲ್ಪ ತೋರುವುದೂ ಕರ್ಣಾದಿಗಳ ವಧೆಯಾಗದುದರಿಂದ ತೋರದಿರುವುದೂ ಆದ ಆ ಬೀಜವು ಅಂಕುರಾವಸ್ಥೆಯಲ್ಲಿರುವುದರಿಂದ ಪ್ರತಿಮುಖಸಂಧಿ; ಮೂರನೆಯಂಕದಲ್ಲಿಯೂ ನಾಲ್ಕನೆಯಂಕದಲ್ಲಿಯೂ ಎಷ್ಟೋ ಅಂಶಗಳಲ್ಲಿ ದ್ರೋಣ ದುಶ್ಶಾಸನಾದಿಗಳ ವಧೆಯ ಸೂಚನೆಯಿಂದ ಪಾಂಡವರ ಜಯಪ್ರಾಪ್ತಿಯ ಸಂಭವದ ದೆಸೆಯಿಂದಲೂ, ಸುಂದರಕನು ತಿಳಿಯಿಸಿದ ವೃಷಸೇನಾರ್ಜುನಕರ್ಣಭೀಮಾದಿಗಳ ಯುದ್ಧದಿಂದ ಮತ್ತೆ ಮತ್ತೆ ಆ ಬೀಜದ ಅನ್ವೇಷಣದ ದೆಸೆಯಿಂದಲೂ ಗರ್ಭಸಂಧಿ; ಬಳಿಕ ಐದನೆಯಂಕದಲ್ಲಿ ಭೀಮಾರ್ಜುನರಿಗೆ ದುರ್ಯೋಧನನು ಸಿಕ್ಕಿದುದು ಮೊದಲುಗೊಂಡು ಆರನೆಯಂಕದಲ್ಲಿ ರಕ್ತದಿಂದ ಸಿಕ್ತನಾದ ಭೀಮಸೇನನು ಬರುವವರೆಗೂ ಅವಮರ್ಶಸಂಧಿ; ಆಮೇಲೆ ನಿರ್ವಹಣಸಂಧಿ. ಈ ಸಂಧಿಗಳ ಅಂಗಗಳು ಅವುಗಳ ಲಕ್ಷಣಗಳು ಅವುಗಳ ಸಮನ್ವಯ—ಎಂಬಿವೆಲ್ಲವೂ ಆವಶ್ಯಕವಾಗಿದ್ದರೂ ಇಲ್ಲಿ ವಿಸ್ತರ ಭಯದಿಂದ ಅವನ್ನು ನಿರೂಪಿಸಲಿಲ್ಲ.

ಈ ನಾಟಕದಲ್ಲಿ ನಾಯಕ, ಯುಧಿಷ್ಠಿರ. ಆತನು ಆತ್ಮಶ್ಲಾಘಿಯಲ್ಲ, ಕ್ಷಮಾಶೀಲ, ಅತಿಗಂಭೀರ, ಮಹಾಸತ್ತ್ವ, ಅಚಂಚಲವೃತ್ತಿ, ನಿಗೂಢವಾದ ಮಾನವುಳ್ಳವನು ಮತ್ತು ದೃಢವ್ರತನು—ಎಂಬುದರಿಂದ ಧೀರೋದಾತ್ತ. ನಾಯಿಕೆ ದ್ರೌಪದಿ. ಆಕೆ ಸ್ವೀಯೆ ಮತ್ತು ಪ್ರಗಲ್ಭೆ. ಪ್ರತಿನಾಯಕ ದುರ್ಯೋಧನ. ಭೀಮ, ದೂರಾನುಬಂಧವುಳ್ಳ ಪ್ರಾಸಂಗಿಕವಾದ ಇತಿವೃತ್ತದ ನಾಯಕನಾದುದರಿಂದ ಪತಾಕಾನಾಯಕ, ಅಥವಾ ಪೀಠಮರ್ದ—ಎನಿಸುವನು.

ಇದರಲ್ಲಿ ವೀರರಸ, ಪ್ರಧಾನ; ಅದಕ್ಕೆ ದುರ್ಯೋಧನಾದಿಗಳು ಆಲಂಬನಗಳು; ವಿಜಯಾನುಕೂಲವ್ಯಾಪಾರ ಮುಂತಾದವುಗಳು ಅನು

ಭಾವಗಳು ; ಧೈರ್ಯಾದಿಗಳು ವ್ಯಭಿಚಾರಿಗಳು. ಇವುಗಳಿಂದ ಅಭಿವ್ಯಕ್ತ ವಾದ ಯುಧಿಷ್ಠಿರನ ಉತ್ಸಾಹವು ವೀರರ ಸತ್ವವನ್ನು ಪಡೆಯುವುದು. ಯುಧಿಷ್ಠಿರನ ಉತ್ಸಾಹವು ಯುದ್ಧವಿಷಯಕವಾದುದರಿಂದ ಯುದ್ಧ ವೀರವೇ ಈ ರಸವು. ಅಂಗಗಳಾದ ಇತರ ರಸಗಳೂ ಇಲ್ಲಿರುವುವು. ಎಂತೆಂದರೆ, ಎರಡನೆಯಂಕದಲ್ಲಿ ಶೃಂಗಾರರಸ; ಅದು ಭಾನುಮತಿ ಯನ್ನು ಆಲಂಬಿಸಿ ಪ್ರವರ್ತಿಸಿರುವುದು. ಆಕೆಯ ಲೀಲೆಗಳಿಂದಲೇ ಅದು ಉದ್ದೀಪಿತವಾದುದು. ಇಲ್ಲಿ ಪ್ರತಿನಾಯಕನಿಷ್ಠರತಿರೂಪಸ್ಥಾಯಿ ಭಾವವೆಂಬುದರಿಂದ ಇದು ರಸವಲ್ಲ; ಮತ್ತೇನೆಂದರೆ, ಇದು ರಸಾ ಭಾಸವೇ—ಎಂದು ಹೇಳಲಾಗದು. ಏಕೆಂದರೆ, ನಾಯಕನ ಪ್ರೇಯಸಿ ಯನ್ನು ಆಲಂಬಿಸಿ ಪ್ರತಿನಾಯಕನಲ್ಲಿ ರತಿಯುಂಟಾದರೆ ಅದನ್ನು ರಸಾ ಭಾಸವೆನಬೇಕು; ಇಲ್ಲಾದರೋ, ಪ್ರತಿನಾಯಕನಾದ ದುರ್ಯೋಧನನಿಗೆ ತನ್ನ ಪ್ರೇಯಸಿಯನ್ನು ಆಲಂಬಿಸಿ ರತಿಯುಂಟಾದುದರಿಂದ ಇದು ರಸಾ ಭಾಸವಲ್ಲ. ಕರುಣರಸವು—ಮೂರನೆಯಂಕದಲ್ಲಿ ದ್ರೋಣವಧವಿಷಯ ದಲ್ಲಿ, ಮೃತಿಹೊಂದಿದ ದ್ರೋಣನನ್ನು ಆಲಂಬಿಸಿ ಪ್ರವೃತ್ತವಾದುದು. ಆತನ ತಿರಸ್ಕಾರವೃತ್ತಾಂತ ಮುಂತಾದವುಗಳಿಂದ ಉದ್ದೀಪಿತವೆನಿಸಿದ ಅಶ್ವತ್ಥಾಮಗತವಾದ ಶೋಕವು ಕರುಣರಸಾತ್ಮಕವಾಗಿ ಪರಿಣಮಿಸು ವುದು. ಆರನೆಯಂಕದಲ್ಲಿ ಚಾರ್ವಾಕನ ವಂಚನೆಗೊಳಗಾಗಿ ಭೀಮ ಮರಣವನ್ನು ನಿಶ್ಚಯಿಸಿದ್ದ ಯುಧಿಷ್ಠಿರಾದಿಗಳಿಗೆ ಥಟ್ಟನೆ ಭೀಮ ದರ್ಶನವಾದುದರಿಂದ ಅದ್ಭುತರಸ. ನಾಲ್ಕನೆಯಂಕದಲ್ಲಿ ಭೀಮನನ್ನು ನೋಡಿದುದರಿಂದ ದುರ್ಯೋಧನ ಸಾರಥಿಗೂ, ಎರಡನೆಯಂಕದಲ್ಲಿ ಪ್ರಚಂಡವಾಯುವಿನ ವೇಗಾತಿಶಯದಿಂದ ಭಾನುಮತಿಗೂ ಭೀತಿಯುಂ ಟಾದಕಾರಣ ಭಯಾನಕ. ಮೂರನೆಯಂಕದಲ್ಲಿ ವಸಾಗಂಧಾರುಧಿರ ಪ್ರಿಯರ ಪ್ರಸಂಗದಲ್ಲಿ ಬೀಭತ್ಸ. ಆ ಅಂಕದಲ್ಲಿಯೇ ಅಶ್ವತ್ಥಾಮನ ಸಂರಂಭದಿಂದ ರೌದ್ರ. ಈ ನಾಟಕದ ಎರಡನೆಯಂಕದೊಳಗೆ ಅಕಾಲ

ದಲ್ಲಿ ರಸೋದ್ಗಮವೆಂದು ಆಲಂಕಾರಿಕರು ಭಾವಿಸುವರು. ಏಕೆಂದರೆ, ಲೋಕಭಯಂಕರವಾದ ಯುದ್ಧವು ಪ್ರಸಕ್ತವಾಗಿರುವಾಗ ಮತ್ತು ಜಯವು ಸಂಶಯಾಸ್ಪದವಾಗಿರುವಾಗ ದುರ್ಯೋಧನನಂತಹ ವೀರನು ಯುದ್ಧೋಚಿತವಾದ ವ್ಯಾಪಾರವನ್ನು ಬಿಟ್ಟು ಮಡದಿಯೊಡನೆ ವಿಹರಿಸುತ್ತಲೇ ಕಾಲಕಳೆಯುವುದೆಂಬುದಿದು ಸ್ವಾಭಾವಿಕವಲ್ಲ; ಇದು ವಿಹಾರಕ್ಕೆ ಸಮಯವಲ್ಲ; ಆದುದರಿಂದಲೆ ಇದು ಅಕಾಲದಲ್ಲಿ ರಸೋದ್ಗಮವೆಂದು. ಕವಿಗೆ ಇಲ್ಲಿ ಇದಿಷ್ಟೇ ಉದ್ದೇಶ; ಏನೆಂದರೆ—ತನ್ನ ಪರಾಕ್ರಮದಲ್ಲಿ ವಿಶೇಷವಾದ ನಂಬುಗೆಯಿಟ್ಟು, ವೀರರಾದ ಪಾಂಡವರನ್ನು ತಿರಸ್ಕಾರಭಾವದಿಂದ ಕಾಣುತ್ತ ನಿಶ್ಚಿಂತನಾಗಿ ಅದೇ ಸಮಯದಲ್ಲಿ ಮಡದಿಯೊಡನೆ ವಿಹಾರಸುಖದಲ್ಲಿರುತ್ತ ದುರ್ಯೋಧನನು ಕೆಟ್ಟುಹೋದನೆಂಬುದನ್ನು ಪ್ರಕಾಶಗೊಳಿಸಬೇಕೆಂಬುದೇ. ಆದುದರಿಂದಲೇ ಕವಿ ಇಲ್ಲಿ ರಸವನ್ನು ಕಲ್ಪಿಸಿದನು.

ಈ ನಾಟಕದಲ್ಲಿ ಕವಿ ಕಲ್ಪಿಸಿರುವ ಪಾತ್ರಗಳಲ್ಲಿ—ಭೀಮಸೇನ, ದ್ರೌಪದಿ, ದುರ್ಯೋಧನ, ಭಾನುಮತಿ, ಅಶ್ವತ್ಥಾಮ, ಕರ್ಣ, ಧೃತರಾಷ್ಟ್ರ, ಗಾಂಧಾರಿ, ಚಾರ್ವಾಕ—ಎಂಬಿವೇ ವಿಶೇಷದಿಂದ ಕಾರ್ಯನಿರ್ವಾಹಕಂಗಳು. ಸಹದೇವ ಅರ್ಜುನ ಮೊದಲಾದ ಪಾತ್ರಗಳು ಸ್ವಲ್ಪವೇ ಕಾರ್ಯನಿರ್ವಾಹವನ್ನು ಮಾಡುವುವು. ಈ ಪಾತ್ರಗಳಲ್ಲಿ ಭೀಮನು ಶತ್ರುಕೃತಗಳಾದ ಅಪರಾಧಗಳನ್ನು ಸರ್ವಥಾ ಸಹಿಸದವನು, ಪ್ರಭಾವಶಾಲಿ, ನಿರ್ಭಯನು, ಶತ್ರುಗಳನ್ನು ಲಕ್ಷ್ಯಮಾಡದವನು, ದೃಢಪ್ರತಿಜ್ಞನು. ಇದು “ಚಲಿತೋದ್ವೃತ್ತಭುಜಂಗಳಿಂ ತಿರುಪಿ ಪೊಯ್ವುದ್ಯದ್ಗದಾದಂಡದಿಂ || ಅರಿಕುಲಮಂ ಕ್ರೋಧದೆಸಂ | ಹರಿಪುದು ಜಗದಲ್ಲಿ ನಿಮ್ಮನದು ನಾಣ್ಚಿಸುಗುಂ ||” ಎಂಬಿವೆ ಮೊದಲಾದ ಈತನ ನುಡಿಗಳಿಂದ ವ್ಯಕ್ತವಾಗುವುದು.

ದ್ರೌಪದಿಯೂ ಶತ್ರುಕೃತವಾದ ಅವಮಾನದಿಂದ ಒಳಗೆ ಪ್ರಜ್ವಲಿಸುತ್ತ ಭೀಮಸೇನಾದಿಗಳಿಗೆ ಉತ್ಸಾಹವನ್ನು ಹೆಚ್ಚಿಸಲು ಪ್ರಯತ್ನಿ

ಸುವಳೂ, ಯುದ್ಧದಲ್ಲಿ ಕುತೂಹಲವುಳ್ಳವಳೂ ಆದ ಪ್ರೌಢೆಯೆನಿಸಿದ ಸ್ತ್ರೀ. ಇದೂ ಮೊದಲನೆಯಂಕದ "ಆರ್ಯಪುತ್ರ! ಇವರ್ಗೆ ನಾಣಿಲ್ಲಂ, ಎಲೆ ಪ್ರಿಯ! ಇಂತಪ್ಪುದಂ ಪ್ರಿಯವಚನಮನಾಂ ಮುನ್ನೆಂದುಂ ಕೇಳ್ದೆನಿಲ್ಲ; ಅದಱಿಂ ನಿನ್ನೊರ್ಮೆ ಪೇೞ್" ಎಂಬಿವೆ ಮುಂತಾದ ನುಡಿಗಳಿಂದ ಸ್ಫುಟವಾಗುವುದು.

ದುರ್ಯೋಧನನಾದರೋ, ಮಾನಿ, ಕಾರ್ಯಾಕಾರ್ಯವಿಚಾರಶೂನ್ಯ, ಶೂರ, ನಿರ್ಭಯ, ತನ್ನ ಪ್ರಭಾವದಲ್ಲಿ ಬಹುವಾಗಿ ನಂಬುಗೆಯುಳ್ಳವನು, ಶತ್ರುಗಳು ದುರ್ಬಲರೆಂದು ಭಾವನೆಯುಳ್ಳವನು, ನಿಶ್ಚಿಂತ, ಸಮಯ ಮುಂತಾದುದನರಿಯದವನು, ಹಟಹಿಡಿವನು, ಸ್ವತಂತ್ರಬುದ್ಧಿಯಿಲ್ಲದವನು, ಉಪಾಯವನ್ನು ತಿಳಿಯದವನು, ಮತ್ತು ಸಂದೇಹಶೀಲನು. ಇವನ ಸಂದೇಹಶೀಲತೆಯೂ ಕರ್ತವ್ಯಾದಿವಿಚಾರಶೂನ್ಯತೆಯೂ ಎರಡನೆಯಂಕದಲ್ಲಿ ಭಾನುಮತೀಸ್ವಪ್ನವೃತ್ತಾಂತವನ್ನು ಕೇಳುವ ಪ್ರಸಂಗದಿಂದಲೂ, ಯುದ್ಧಸಂಮರ್ದವು ಪ್ರಾಪ್ತವಾಗಿದ್ದರೂ ಭಾನುಮತಿಯೊಡನೆ ರತಿಸುಖವನ್ನನುಭವಿಸಬೇಕೆಂಬ ಇವನ ಕುತೂಹಲದಿಂದಲೂ ತಿಳಿಯುವುದು. ಇವನಿಗೆ ಆತ್ಮಪ್ರಭಾವದಲ್ಲಿ ಹೆಚ್ಚಾದ ನಂಬುಗೆಯುಂಟೆಂಬುದು—ಅರ್ಜುನನು ಜಯದ್ರಥನನ್ನು ಕೊಲ್ಲುವೆನೆಂದು ಪ್ರತಿಜ್ಞೆಮಾಡಿದ್ದರೂ ಇದನ್ನು ತಿಳಿದ ಇವನಿಗೆ ಮನಸ್ಸಿನಲ್ಲಿ ಸ್ವಲ್ಪವೂ ವ್ಯಾಕುಲತೆಯುಂಟಾಗದಿರುವಿಕೆಯಿಂದ ಅಭಿವ್ಯಕ್ತವಾಗುವುದು. ಅತ್ಯಂತ ವಿಷಮವಾದ ಸಮಯವು ಸಂಪ್ರಾಪ್ತವಾಗಿದ್ದರೂ ಅಶ್ವತ್ಥಾಮನನ್ನು ಸೇನಾಧಿಪತಿತ್ವದಲ್ಲಿ ಅಭಿಷೇಚಿಸಲು ಅಂಗೀಕಾರಮಾಡದುದು, ಇವನು ಸಮಯಾನಭಿಜ್ಞನೆಂಬುದನ್ನು ಪ್ರಕಾಶಗೊಳಿಸುವುದು. ಇದೇ ಉಪಾಯಾನಭಿಜ್ಞತೆಯೂ, ಮಹತ್ತರವಾದ ಹಾನಿಯೊದವಿದರೂ ಶರೀರಬಿದ್ದುಹೋಗುವವರೆಗೂ ಪಾಂಡವರಲ್ಲಿ ಇಟ್ಟಿದ್ದ ವೈರಾನುಬಂಧವು, ಇವನು ಹಟಹಿಡಿವನೆಂಬು

ದನ್ನು ಚೆನ್ನಾಗಿ ತೋರಿಸುವುದು. ದ್ರೋಣಾಚಾರ್ಯರ ಪರಾಕ್ರಮವನ್ನು ತಿಳಿದಿದ್ದರೂ ಕರ್ಣನ ಮಾತನ್ನು ಅನುವರ್ತಿಸುತ್ತಿದ್ದುದು ಇವನ ಸ್ವತಂತ್ರಬುದ್ಧಿಶೂನ್ಯತೆಯನ್ನು ಅಭಿವ್ಯಕ್ತಿಗೊಳಿಸುವುದು. "ಜನಪರ್ ನೀಂ ನೀನುಮಾಭೂಪತಿಪಶುವವರಿನ್ನಿರ್ವ್ವರಿರ್ಪ್ಪಂದು ನಿಮ್ಮಂಗನೆ" ಎಂಬಿದೆ ಮೊದಲಾದ ಇವನ ನುಡಿಗಳು ಇವನ ನಿರ್ಭಯತ್ವವನ್ನು ತೋರಿಸುವುವು. ಇವನು ಶೂರನೆಂಬುದು ಸ್ಪಷ್ಟವೇ.

ಭಾನುಮತಿ ಪತಿವ್ರತೆ, ಆಸ್ತಿಕ್ಯವುಳ್ಳವಳು, ಸಮಯಜ್ಞೆ, ಮತ್ತು ಚತುರೆ—ಎಂಬುದು ಎರಡನೆಯಂಕದಲ್ಲಿ ಸ್ಪಷ್ಟವಾಗಿರುವುದು.

ಅಶ್ವತ್ಥಾಮನು ಮಹಾವೀರ, ಶತ್ರುನಿರ್ಮೂಲನದಲ್ಲಿ ಸಮರ್ಥ, ಕೌರವಪಕ್ಷಪಾತಿ, ಗುರುಜನಾನುರಾಗಿ, ಪ್ರಾಜ್ಞ, ಮತ್ತು ಬಹುಕೋಪಶೀಲ. ಈತನು ಶತ್ರುನಿರ್ಮೂಲನದಲ್ಲಿ ಸಮರ್ಥನೆಂಬುದು, "ಭುಜಬಲಶಾಲಿಯುಂ ದಿವ್ಯಾಸ್ತ್ರಕೋವಿದನುಂ ಆಗಿ ದ್ರೋಣಾಚಾರ್ಯಂಗೆಣೆಯೆನಿಸಿದ ನಿನ್ನಲ್ಲಿ ಅದಾವುದುಮಸಂಭಾವ್ಯಮಲ್ತು" ಎಂಬಿದೆ ಮೊದಲಾದ ಕೃಪಾದಿಗಳ ನುಡಿಗಳಿಂ ಅಭಿವ್ಯಕ್ತವಾಗುವುದು. ಕೌರವಪಕ್ಷಪಾತಿತ್ವವು ಸ್ಪಷ್ಟವೇ. ದ್ರೋಣಾಪವಾದಾಸಹಿಷ್ಣುತೆ ಈತನಿಗಿರುವ ಗುರುಜನಾನುರಾಗವನ್ನು ಅವಬೋಧಿಸುವುದು. ಬಹುಕೋಪಶೀಲನೆಂಬುದು "ಇದೆಬಿಟ್ಟೆನಾಜಾತಿಯುಂ" ಎಂಬಿದೆ ಮೊದಲಾದ ನುಡಿಗಳಿಂ ಸ್ಪಷ್ಟವಾಗುವುದು. ಕರ್ಣನೆಸಗಿದ ಅವಮಾನವನ್ನು ಸಹಿಸದಿರುವಿಕೆ ತೇಜಸ್ವಿತೆಯನ್ನೂ, ಕರ್ಣನ ತಲೆಯಲ್ಲಿ ಇರಿಸುವೆನೆಡಗಾಲನೀಗಳ್" ಎಂಬುದು ಶೌರ್ಯವನ್ನೂ ಪ್ರಕಾಶಗೊಳಿಸುವುದು. ಈತನು ಸತ್ಯಸಂಧನಾದರೂ ಪ್ರಸಂಗವೊದವಿದಾಗ ಪ್ರತಿಜ್ಞೆಯನ್ನು ಅಲಕ್ಷ್ಯಮಾಡುವನೆಂಬುದು "ಪವನಸುತನತ್ತಣಿಂದಂ | ಯುವರಾಜನನೋವಲುಟಿದುದಿಲ್ಲುಟಿದಸ್ತ್ರಂ" ಎಂಬೀತನ ವಚನದಿಂದ ಅಭಿವ್ಯಕ್ತವಾಗುವುದು. ಈತನು ಕೃತಜ್ಞನಾದರೂ ಅವಮಾನವನ್ನು ಸಹಿಸು

ವಾತನಲ್ಲ. ಆದುದರಿಂದಲೇ ಕರ್ಣಪಕ್ಷಪಾತಿಯಾದ ದುರ್ಯೋಧನನನ್ನು ಪರಿತ್ಯಜಿಸಿದನೆಂಬುದು ಅಯ್ದನೆಯಂಕದಲ್ಲಿ ಹೇಳಲ್ಪಟ್ಟಿರುವುದು.

ಕರ್ಣನಾದರೋ ಕುಟಿಲಮತಿ, ತನ್ನ ಸಾಮರ್ಥ್ಯದಲ್ಲಿಯೇ ಹೆಚ್ಚಾಗಿ ನಂಬುಗೆಯುಳ್ಳವನು, ಪಿಶುನನು, ಇತರರನ್ನು ಅವಮಾನ ಗೊಳಿಸುವ ಸ್ವಭಾವದವನು, ಅತಿಕೋಪಿ, ಶೂರನು, ದ್ರೋಣನ ನಡೆವಳಿಯನ್ನು ದುರ್ಯೋಧನನು ಬೇರೆತೆರದಲ್ಲಿ ಗ್ರಹಿಸುವಂತೆ ಮಾಡಿ ದುದರಿಂದಲೆ ಇವನ ಪಿಶುನತೆಯೂ ಕುಟಿಲಮತಿತ್ವವೂ ಸ್ಪಷ್ಟವಾಗು ವುದು. ಶೂರನೆಂಬುದು ಅರ್ಜುನನೊಡನೆ ಕಾಳೆಗದಲ್ಲಿ ಹೋರಾಡಿದುದ ರಿಂದಲೇ ವ್ಯಕ್ತವೆನಿಸುವುದು. ತನ್ನ ಸಾಮರ್ಥ್ಯದಲ್ಲಿ ಕೇವಲವಾದ ನಂಬುಗೆಯಿವನಿಗಿದ್ದಿತೆಂಬುದು "ಕಡುಗಮನಾನೆನ್ನೆವರಂ | ಪಿಡಿವೆನೊ ಅನ್ನೆವರಮಿತರಖಡ್ಗಂಗಳಿನೇಂ || ಕಡುಗದಿನಿದಱಿಂದಾಗದ | ಕಡು ಗಜ್ಜಂ ಜಗದೊಳಕ್ಕುಮಿನ್ನಾವುದಱಿಂ ||" ಎಂಬಿದೆ ಮೊದಲಾದ ವಚನಂಗಳಿಂದ ಪ್ರಕಾಶವಾಗುವುದು. ಇತರರನ್ನು ಅವಮಾನಗೊಳಿಸುವ ಸ್ವಭಾವದವನೆಂಬುದು ಪ್ರಯೋಜನವೇನೂ ಇಲ್ಲದೆ ಅಶ್ವತ್ಥಾಮನಿಗೆ ಮಾಡಿದ ಅವಮಾನದಿಂದ ಸ್ಪಷ್ಟವು.

ಗಾಂಧಾರೀಧೃತರಾಷ್ಟ್ರರು ಕರ್ತವ್ಯವನ್ನು ಬಲ್ಲವರು, ಸಮಯ ಸ್ವರೂಪವನ್ನು ತಿಳಿದವರು, ವಿವೇಕಶೀಲರು, ಆದರೂ ದುರ್ಯೋಧನನಿಗೆ ಕೇವಲ ವಶರಾಗಿ ಅವನ ಛಂದಾನುವರ್ತಿಗಳಾಗಿದ್ದರು — ಎಂಬುದು ನಾಲ್ಕನೆಯಂಕದಿಂದ ತಿಳಿವುದು.

ಚಾರ್ವಾಕನು, ಮಾಯಾವಿಯಾದ ರಕ್ಕಸನಾದುದರಿಂದ ಇವನ ಸ್ವಭಾವವು ಸ್ವಜಾತಿಗುಚಿತವಾದುದೆಂಬುದು ಸ್ಪಷ್ಟವೇ.

ಸಹದೇವನು, ವಿನೀತನು, ಹಿರಿಯರಲ್ಲಿ ಶ್ರದ್ಧೆಯುಳ್ಳವನು, ಪ್ರಶಾಂತನು, ಮತ್ತು ಶೂರನು. ಇದು ಪ್ರಥಮಾಂಕದಲ್ಲಿರುವ ಈತನ ಮಾತುಗಳಿಂದ ವಿದಿತವಾಗುವುದು.

ಅರ್ಜುನನು, ಶೂರನು ಮತ್ತು ವಿನೀತನು. ಇದು ನಾಲ್ಕನೆಯಂಕದಲ್ಲಿರುವ ಈತನ ನುಡಿಗಳಿಂದ ಅಭಿವ್ಯಕ್ತವಾಗುವುದು.

ಈ ಪಾತ್ರಗಳ ಆ ಆ ನಡೆಗಳಿಂದ ರಸಪರಿಪೋಷವನ್ನು ಹೊಂದಿರುವ ಈ ನಾಟ್ಯಕವು ಅತ್ಯಂತ ಹೃದಯಂಗಮವೆನಿಸಿರುವುದು. ಈ ನಾಟಕದಲ್ಲಿರುವ ಅನೇಕ ಪ್ರಸಂಗಗಳು ರಸಿಕರ ಮನಸ್ಸನ್ನು ಉಲ್ಲಾಸಗೊಳಿಸುವುವೇ ಆಗಿರುವುವು; ಆದರೂ ಎರಡನೆಯಂಕದಲ್ಲಿ ಭಾನುಮತಿಯ ಕನಸಿನ ವೃತ್ತಾಂತ, ಮೂರನೆಯಂಕದಲ್ಲಿ ಅಶ್ವತ್ಥಾಮನಿಗೆ ಕರ್ಣನೊಡನುಂಟಾದ ಕಲಹ, ಅಯ್ದನೆಯಂಕದಲ್ಲಿ ಭೀಮಾರ್ಜುನರು ಮಾಡಿದ ಧೃತರಾಷ್ಟ್ರದರ್ಶನ, ಆರನೆಯಂಕದಲ್ಲಿ ಚಾರ್ವಾಕನು ಮಾಡಿದ ಯುಧಿಷ್ಠಿರವಂಚನ, ಭೀಮಸಮಾಗಮ—ಎಂಬೀವಿಷಯಗಳು ವಿಶೇಷವಾಗಿ ಶಿರಃಕಂಪವನ್ನುಂಟುಮಾಡುವುವು. ಸಹೃದಯರ ಅಂತರಂಗವನ್ನು ಮದವೇರಿಸುವುವು.

ಈ ನಾಟಕವು ಕೌರವಪಾಂಡವರ ಚರಿತ್ರೆಯಿಂದ—ಪ್ರಬಲರಾದ ಹಗೆಗಳನ್ನೂ ತಿರಸ್ಕರಿಸಿ ಕುಟಿಲಬುದ್ಧಿಯುಳ್ಳವರ ಮತವನ್ನು ಅನುವರ್ತಿಸುವ ಮೂಢರಿಗೆ ಅದೇನು ಗತಿಯಾಗುವುದೋ! ಅಪ್ರಿಯವಾದ ಮಾತು ಅದೆಂತು ಸೌಹಾರ್ದವನ್ನು ತಪ್ಪಿಸುವುದು! ಕಾಲಗತಿಯಿಂದ ಪ್ರಬಲರೂ ಎಂತಹ ವಿಪತ್ತನ್ನು ಪಡೆವರು! ವಿಪತ್ತನ್ನು ಪಡೆದರೂ ಭಗವಂತನಲ್ಲಿ ಭಕ್ತಿಭಾವವುಳ್ಳವರಾಗಿ ಕಾಲಗತಿಯಿಂದಲೇ ಮತ್ತೆ ಅದೆಂತು ಉನ್ನತಿಪಡೆವರು!—ಎಂಬುದನ್ನೂ, ಮತ್ತು—ಕೇಡುಸಾರ್ದಿರೆ ಗಾಂಪೇಜುದ ಚಿತ್ತಮುಳ್ಳವರ್ಗೆ ನೀಡುಂ ಬುದ್ಧಿತಾಂ ಕುಂದುಗುಂ ||—ಎಂಬುದನ್ನೂ ಸ್ಪಷ್ಟವಾಗಿ ಪ್ರದರ್ಶನಗೊಳಿಸುವುದು. ಇದರಿಂದ ಸುಖವಾಗಲಿ ದುಃಖವಾಗಲಿ ಯಾವನಿಗೆ ತಾನೇ ಕೇವಲ ಸ್ಥಿರವಾಗಿರುವುದು? ದಶೆಯು ರಥಚಕ್ರದ ಪಟ್ಟಿಯಂತೆ ಕ್ರಮವಾಗಿ ಮೇಲೆ ಹೋಗುತ್ತಲೂ ಕೆಳಗೆ ಬರುತ್ತಲೂ ಇರುವುದು—ಎಂಬೀಯರ್ಥವೇ ಸ್ಪಷ್ಟವಾಗುವುದು.

ಶ್ರೀಮದ್ಭಟ್ಟನಾರಾಯಣವಿರಚಿತವಾದ ಈ ನಾಟಕದಲ್ಲಿ ಭಾಷೆಯು ಹೃದಯಂಗಮವಾದುದಲ್ಲವೆಂದು ಆಧುನಿಕರು ಕೆಲವರು ಭಾವಿಸುವರು. ಕವಿಕುಲಚಕ್ರವರ್ತಿಯಾದ ಕಾಳಿದಾಸನ ಮತ್ತು ಕವಿಕುಲ ಸಾರ್ವಭೌಮನಾದ ಭವಭೂತಿಯ ಭಾಷೆಯನ್ನು ಇದೇನೋ ಹೋಲಲಾರದು. ಆದರೂ ಭಾಷೆಯಿದು ಹೃದಯಂಗಮವೇ ಅಹುದು. ಪ್ರಾಚೀನರಿಗೆ ಈ ನಾಟಕವು ಅತಿಪ್ರಿಯವಾದುದು; ಆದುದರಿಂದಲೇ ಅನೇಕರಾದ ಗ್ರಂಥಕಾರರು ಈ ನಾಟಕದ ಪದ್ಯಗಳನ್ನು ಅಲ್ಲಲ್ಲಿ ಉದಾಹರಿಸಿರುವರು. ಇಲ್ಲಿಯ ಅನೇಕ ಪದ್ಯಗಳು ದಶರೂಪಕದಲ್ಲಿಯೂ ಸಾಹಿತ್ಯ ದರ್ಪಣದಲ್ಲಿಯೂ ವಿಶೇಷದಿಂದ ಉದಾಹರಣೆಯಾಗಿ ಪರಿಗ್ರಹಿಸಲ್ಪಟ್ಟಿರುವುವು. ಕಾಳಿದಾಸಾದಿಗಳಿಂದ ಉಪವರ್ಣಿತಗಳಾದ ಅರ್ಥಗಳ ಛಾಯೆ ಈ ನಾಟಕದ ಕೆಲಕೆಲವೆಡೆಗಳಲ್ಲಿ ಕಾಣುವುದು. ಎಂತೆನೆ, ಅಕ್ಕೆ, ಸಖಿಯರ ಮಾಱುನುಡಿಯಿಂ ಸ್ಪಷ್ಟಮಕ್ಕುಂ—ಎಂದು ಎರಡನೆ ಯಂಕದಲ್ಲಿ ದುರ್ಯೋಧನನು ನುಡಿವನು. ಇಂತಹುದೇ ಶಾಕುಂತಲದೊಳಗೆ ಶಕುಂತಲಾವಿಷಯದಲ್ಲಿ ದುಷ್ಯಂತನ ನುಡಿ. ಈ ರೀತಿಯಲ್ಲಿ ಇನ್ನೂ ಅನೇಕ ಸ್ಥಲಗಳನ್ನು ಬುದ್ಧಿಶಾಲಿಗಳು ಸ್ವಬುದ್ಧಿಯಿಂದ ಊಹಿಸಬಹುದು. ವಿಸ್ತರಭಯದಿಂದ ಇಲ್ಲಿ ಉದಾಹರಿಸಲಾಗಲಿಲ್ಲ. ಈ ನಾಟಕಕ್ಕೆ ವೇಣೀಸಂಹಾರವೆಂಬ ಹೆಸರಿದ್ದರೂ ಸಾಹಿತ್ಯದರ್ಪಣಾದಿಗಳಲ್ಲಿ "ವೇಣಿ" ಎಂದೇ ವ್ಯವಹಾರವಿರುವುದು.

ಈ ನಾಟಕದಲ್ಲೇನೋ ಕೌರವವಿಜಯವಿಷಯದಲ್ಲಿ ಭೀಮಸೇನನದೇ ಪರಾಕ್ರಮವು ವಿಶೇಷವಾಗಿ ಕಾಣುವುದು. ಯುಧಿಷ್ಠಿರನು ಕಡೆಯಲ್ಲಿ ಆರನೆಯಂಕದಲ್ಲಿ ಬರುವನು. ಆದರೂ ವಿಜಯದಿಂದ ಉಂಟಾದ ರಾಜ್ಯಾಭಿಷೇಕಾದಿ ಫಲಕ್ಕೆ ಸ್ವಾಮಿಯು ಯುಧಿಷ್ಠಿರನೇ ಆದುದರಿಂದ ಆತನೇ ನಾಯಕನೆಂದು ತಿಳಿಯಬೇಕು. ಈ ನಾಟಕದ ಸ್ವರೂಪವನ್ನು ಈ ರೀತಿ ಇಲ್ಲಿಯವರೆಗೆ ತಿಳಿಯಿಸಿದುದಾಯಿತು. ಇನ್ನು ಗ್ರಂಥಕರ್ತೃವಿನ ವಿಷಯವನ್ನು ವಿಚಾರಮಾಡುವೆವು.

ಕವಿಶ್ರೇಷ್ಠನಾದ ಶ್ರೀ ಭಟ್ಟನಾರಾಯಣನು ಯಾವ ದೇಶವನ್ನು ತನ್ನ ಜನ್ಮದಿಂದ ಅಲಂಕಾರಗೊಳಿಸಿದನೆಂಬುದನ್ನು ಈ ವೇಣೀಸಂಹಾರದಿಂದ ಚೆನ್ನಾಗಿ ನಿರ್ಧರಿಸಲು ಸಾಧ್ಯವಲ್ಲ. ಈ ವಿಷಯದಲ್ಲಿ ಯಾವ ಪ್ರಮಾಣವೂ ಅದರೊಳಗೆ ದೊರೆಯುವುದಿಲ್ಲ. ಕೆಲವರು ಈ ನಾಟಕದಲ್ಲಿ ಈತನು "ಮೃಗರಾಜಲಕ್ಷ್ಮ" ಎಂದು ತನಗೆ ವಿಶೇಷವನ್ನು ಹೇಳಿಕೊಂಡಿರುವನೆಂದು ತಿಳಿವರು. ಇದು ಈ ರೀತಿಯಲ್ಲಿಯೇ ಇರುವ ಸಂದರ್ಭದಲ್ಲಿ ಆಗ ಈತನು ದಾಕ್ಷಿಣಾತ್ಯನಲ್ಲವೆಂಬುದು ಸ್ಪಷ್ಟವೇ. ಏಕೆಂದರೆ, ಮೃಗರಾಜಲಕ್ಷ್ಮ—ಎಂದರೆ ಸಿಂಹಚಿಹ್ನನು. ಸಿಂಹ—ಎಂಬ ಉಪನಾಮವುಳ್ಳವನೆಂಬರ್ಥ. ಸಿಂಹೋಪನಾಮಕರಾದ ಭಟ್ಟರು ದಾಕ್ಷಿಣಾತ್ಯರಲ್ಲಿ ದೊರೆಯುವುದಿಲ್ಲ. ಡಾಕ್ಟರ್ ವಿಲ್ಸನ್ ಮಹಾಶಯರು, ಮೃಗರಾಜಲಕ್ಷ್ಮತ್ವ ಭಟ್ಟತ್ವ—ಎಂಬಿವೆರಡೂ ಪರಸ್ಪರ ವಿರುದ್ಧವೆಂದೇ ಹೇಳುವರು. ಅವರ ಅಭಿಪ್ರಾಯವಿದು—ಭಟ್ಟರು ಬ್ರಾಹ್ಮಣರು, ಸಿಂಹೋಪನಾಮಕರಾದರೋ ಬ್ರಾಹ್ಮಣರಲ್ಲ—ಎಂದು. ಇದು ಅವರಿಗೆ ಔತ್ತರಾಹಾದಿಬ್ರಾಹ್ಮಣಪರಿಚಯವಿಲ್ಲದುದರಿಂದ ಉಂಟಾದ ಅಭಿಪ್ರಾಯ. ನಾನಾವಿಧೋಪಾಧಿಗಳಿಂದ ಅಲಂಕೃತರೆನಿಸಿದ ದರಭಾಂಗಾಧಿರಾಜರಾದ ಶ್ರೀರಮೇಶ್ವರಸಿಂಹರಂತೆ ಸಿಂಹೋಪನಾಮರಾದ ಬ್ರಾಹ್ಮಣರು ಅನೇಕರಿರುವರು. ಆದುದರಿಂದಲೇ ಇದು ವಿರುದ್ಧವಲ್ಲವೆಂದು ತಿಳಿಯಬೇಕು. ಕೆಲವರು—ವಂಗದೇಶದ ಟಾಗೋರವಂಶದವನು ಶ್ರೀ ಭಟ್ಟನಾರಾಯಣನೆನ್ನುವರು. ಆ ವಿಷಯದಲ್ಲಿ ಇದುವರೆಗೂ ನಮಗೆ ಪ್ರಮಾಣ ದೊರೆತಿಲ್ಲ. ಎಂತಾದರೂ ಆಗಲಿ, ಆತನು ದಾಕ್ಷಿಣಾತ್ಯನಲ್ಲವೆಂಬುದರಲ್ಲಿ ವಿವಾದವೇನೂ ಇಲ್ಲ. ಈತನು ಪಂಚರಾತ್ರಾನುಯಾಯಿಯೆಂದು ಹೇಳುವರು. ಆ ವಿಷಯದಲ್ಲಿಯೂ ತಕ್ಕ ಪ್ರಮಾಣವೇನೂ ಇಲ್ಲ.

ಮತ್ತೇನೆಂದರೆ, ಈ ವೇಣೀಸಂಹಾರದ ಮೊದಲನೆಯಂಕದಲ್ಲಿ "ರಮಿಸುತ್ತುಂ ನಿಟ್ಟೆಯಿಂದಾತ್ಮನೊಳತಿವಿಶದಧ್ಯಾನದೊಳ್" ಎಂಬ

ಪದ್ಯದಲ್ಲಿ ಭಗವಂತನಾದ ಶ್ರೀಕೃಷ್ಣನಿಗೆ ಪರಮಾತ್ಮಭಾವವು ಭೀಮ ಮುಖದಿಂದ ವರ್ಣಿತವಾಗಿರುವುದು. ಅಲ್ಲದೆ ಆರನೆಯಂಕದ ಕಡೆಯಲ್ಲಿ "ಒಲ್ದು ನೀಂ ನುಡಿವೆ ದೇವಂ ಧನ್ಯನೊಳ್‌ನನ್ನೊಳ್" ಎಂದು ಯುಧಿಷ್ಠಿರನ ನುಡಿಯಲ್ಲಿಯೂ ಮತ್ತು "ಅಚ್ಯುತನೊಳ್ ಶ್ರೀಪರಮಾತ್ಮನೊಳ್ ದೃಢಮಭಿನ್ನಂ ಭಕ್ತಿನಿಂದಿರ್ಕೆ" ಎಂದು ಭರತವಚನದಲ್ಲಿಯೂ ವರ್ಣಿತವಾಗಿರುವುದು. ಅದರಲ್ಲಿ ಮೊದಲೆರಡೂ ಪಾಂಡವರಿಗೆ ಭಗವಂತನಾದ ಶ್ರೀಕೃಷ್ಣನಲ್ಲಿ ಇರುವ ಸದ್ಭಾವವನ್ನು ತೋರಿಸುವುದಕ್ಕೋಸ್ಕರವೇ. ಮಹಾಭಾರತಾದಿಗಳಲ್ಲಿಯೂ ಭಗವಂತನಾದ ಶ್ರೀಕೃಷ್ಣನ ವಿಷಯದಲ್ಲಿ ಪರಮಾತ್ಮಭಾವವು ವರ್ಣಿತವಾಗಿರುವುದು. ಭಗವದ್ಗೀತೆಯಲ್ಲಿ ವಿಶ್ವರೂಪಪ್ರದರ್ಶನವಿಚಾರವು ಪ್ರಾಯಕವಾಗಿ ಎಲ್ಲರಿಗೂ ವಿದಿತವಾದುದು. ಶ್ರೀಕೃಷ್ಣನು ಲೀಲಾಮಾನುಷವಿಗ್ರಹನಾದರೂ ಆತನನ್ನು ಮಾನುಷರೂಪದಿಂದಲ್ಲ, ದಿವ್ಯಸ್ವರೂಪದಿಂದಲೇ ಕವಿಗಳು ವರ್ಣಿಸಿರುವರು. ಆಲಂಕಾರಿಕರೂ ಶ್ರೀಕೃಷ್ಣನು ದಿವ್ಯನಾಯಕನೆಂದು ಹೇಳುವರು. "ಅಚ್ಯುತನೊಳ್ ಪರಮಾತ್ಮನೊಳ್ ದೃಢಮಭಿನ್ನಂ ಭಕ್ತಿನಿಂದಿರ್ಕೆ" ಎಂಬ ಪದ್ಯದಲ್ಲಿ ಪರಮಾತ್ಮನ ವಿಷಯದಲ್ಲಿ ಪ್ರಾರ್ಥಿಸಲ್ಪಡುವ ಭಕ್ತಿಯು "ಅಭಿನ್ನಂ" ಎಂದರೆ ದ್ವೈತಸಂಪರ್ಕವಿಲ್ಲದುದೆಂದು ಹೇಳಲ್ಪಟ್ಟಿರುವುದು. ಆದರಿಂದ ಸಗುಣೋಪಾಸನೆಯಲ್ಲಿ ಭಗವದ್ವಿಷ್ಣುಭಕ್ತಿಯನ್ನೇ ಪ್ರಾರ್ಥಿಸುವನಾದರೂ ದ್ವೈತದಲ್ಲಿ ಅಪೇಕ್ಷೆಯಿಲ್ಲದ ಈ ಭಟ್ಟನಾರಾಯಣನು ಪರಮಾರ್ಥದಿಂದ ಅದ್ವೈತವಾದಿಯೇ ಅಹುದೆಂಬುದು ಸ್ಪಷ್ಟವು.

ಭಟ್ಟನಾರಾಯಣನು ಯಾವಾಗ ಜನಿಸಿದನು—ಎಂಬುದು ಈಗ ವಿಚಾರಮಾಡಲ್ಪಡುವುದು. ಈ ವಿಷಯದಲ್ಲಿ ಪ್ರತ್ಯಕ್ಷವಾಗಿ ಪ್ರಮಾಣವಾವುದೂ ದೊರೆಯುವುದಿಲ್ಲ. ಕೇಂಬ್ರಿಡ್ಜ್ ವಿಶ್ವವಿದ್ಯಾಪೀಠ ಪಂಡಿತರಾದ ಮ್ಯಾಕ್ಡೋನಾಲ್ಡ್ ಮಹಾಶಯರು ಯಾವುದೋ ಒಂದು ತಾಮ್ರ

ಶಾಸನವಿದೆಯೆಂದೂ ಅದರಲ್ಲಿ ಶ್ರೀ ಭಟ್ಟನಾರಾಯಣನ ಹೆಸರು ಉಲ್ಲಿಖಿತವಾಗಿರುವುದೆಂದೂ ಸುಮ್ಮನೆ ಪ್ರಕಾಶಪಡಿಸಿರುವರು. ಈ ತಾಮ್ರಶಾಸನವೂ ಇದುವರೆಗೆ ನಮಗೆ ದೃಷ್ಟಿಪಥಕ್ಕೆ ಬಿದ್ದಿಲ್ಲ. ಒಂದುವೇಳೆ ದೃಷ್ಟಿಗೋಚರವಾದರೂ ಅವನೇ ಈ ವೇಣೀಸಂಹಾರ ನಾಟಕದ ಪ್ರಣೇತೃವಾದ ಭಟ್ಟನಾರಾಯಣನೆಂಬ ವಿಷಯದಲ್ಲಿ ಯಾವುದಾದರೂ ತಕ್ಕ ಪ್ರಮಾಣವಿರುವುದಾವಶ್ಯವು. ಪ್ರಮಾಣ ದೊರೆವ ಪಕ್ಷದಲ್ಲಿ ಆಗ ಭಟ್ಟನಾರಾಯಣನ ಕಾಲವನ್ನು ನಿರ್ಣಯಿಸಬಹುದು. ಇದುವರೆಗೂ ನಮಗೆ ಪ್ರಮಾಣವು ದೊರೆತಿಲ್ಲ. ಆದುದರಿಂದ ಈ ವಿಷಯದಲ್ಲಿ ಅನುಮಾನ ಪ್ರಮಾಣವನ್ನೇ ಇಟ್ಟುಕೊಂಡು ಪ್ರವರ್ತಿಸಬೇಕಾಯಿತು. ಈಯನುಮಾನಪ್ರಮಾಣದಿಂದ ಕಾವ್ಯಾಲಂಕಾರ ಸೂತ್ರಪ್ರಣೇತೃವಾದ ವಾಮನನಿಗಿಂತ ಭಟ್ಟನಾರಾಯಣನು ಹಿಂದಣವನೆಂದು ವ್ಯಕ್ತವಾಗುವುದು. ವಾಮನನು ಕಾವ್ಯಾಲಂಕಾರಸೂತ್ರವೃತ್ತಿಯಲ್ಲಿ ಅನೇಕ ಸ್ಥಳಗಳಲ್ಲಿ ವೇಣೀಸಂಹಾರದ ವಚನಗಳನ್ನು ಉದಾಹರಿಸಿರುವನು. ಅದೆಂತೆನೆ, ಸಹೋಕ್ತ್ಯಲಂಕಾರದ ಉದಾಹರಣೆಗೆ ವೇಣೀಸಂಹಾರದ ಅಯ್ದನೆಯಂಕದ "ಪಡೆದಂಪೊಣ್ಮಿಸ್ತಮಂ ಶತ್ರುಗಳೊಡನಿವನೊತ್ಸಾಣದೊಳ್ ಸೇರ್ಗೆ ಸೈನ್ಯಂ" ಎಂಬರ್ಥವುಳ್ಳ ಪದ್ಯವನ್ನು ಉದಾಹರಿಸಿರುವನು. ಇದೇ ರೀತಿಯಲ್ಲಿ ಅನೇಕೋದಾಹರಣೆಗಳಿರುವುವು. ವಾಮನ-ಎಂಬ ಹೆಸರುಳ್ಳವರು ಅನೇಕರು ಭಾರತವರ್ಷದಲ್ಲಿ ಪ್ರಾದುರ್ಭವಿಸಿರುವರು. ಅವರಲ್ಲಿ ಭಟ್ಟಬಾಣೋಪಪದವುಳ್ಳ ವಾಮನ, ಕಾವ್ಯಾಲಂಕಾರಸೂತ್ರಪ್ರಣೇತೃವಾದ ವಾಮನ, ಪಾಣಿನೀಯಸೂತ್ರಗಳಿಗೆ, ಕಾಶಿಕಾ-ಎಂಬ ವೃತ್ತಿಯನ್ನು ವಿರಚಿರುವ ವಾಮನ—ಎಂದು ಮೂವರೇ ಸಂಸ್ಕೃತ ಪಂಡಿತರಲ್ಲಿ ಪ್ರಖ್ಯಾತರಾದವರು, ಅವರಲ್ಲಿ ಭಟ್ಟಬಾಣೋಪಪದಾಂಕಿತನಾದ ವಾಮನನನು "ವಾಮನಭಟ್ಟಬಾಣ" ನೆಂದು ತನ್ನನ್ನು ಉಲ್ಲೇಖಿಸಿಕೊಂಡಿರುವನು. ಈತನೇ ಪಾರ್ವತೀಪರಿಣಯ ಮುಂತಾದ ಗ್ರಂಥಗಳ

ಪ್ರಣೇತೃವೆಂದು ಪಾರ್ವತೀಪರಿಣಯದ ಉಪೋದ್ಘಾತದಲ್ಲಿ ಅಭಿನವ ಭಟ್ಟಬಾಣಶಬ್ದತರ್ಕಾಲಂಕಾರವಿದ್ಯಾಭೂಷಣಭಟ್ಟಾಚಾರ್ಯರೆನಿಸಿದ ಶ್ರೀ ಕೃಷ್ಣಮಾಚಾರ್ಯರು ಪ್ರಮಾಣಪುರಸ್ಸರವಾಗಿ ಸಾಧಿಸಿರುವರು. ಕಾವ್ಯಾಲಂಕಾರಸೂತ್ರಗಳ ಕರ್ತೃವಾದ ವಾಮನನಾದರೋ ಭಟ್ಟಬಾಣನೆಂದು ತನ್ನನ್ನು ಉಲ್ಲೇಖಿಸಿಕೊಳ್ಳುವುದಿಲ್ಲ. ಆದುದರಿಂದ ಇವನು ಅವನಲ್ಲ. ಕಾಶಿಕಾವೃತ್ತಿಯನ್ನು ಬರೆದ ವಾಮನನಾದರೂ ಕಾವ್ಯಾಲಂಕಾರಸೂತ್ರ ನಿರ್ಮಾತೃವಾದ ವಾಮನನಿಗಿಂತ ಬೇರೆಯೋ ಅಲ್ಲವೋ ಎಂದು ಮಹತ್ತರವಾದ ಸಂದೇಹವಿರುವುದು. ಕಾವ್ಯಾಲಂಕಾರಸೂತ್ರನಿರ್ಮಾತೃವಾದ ವಾಮನನು ಪರಮವೈಯಾಕರಣನು. ಅದು, ಕಾವ್ಯಾಲಂಕಾರಸೂತ್ರಗಳ ಪ್ರಯೋಗಿಕೆಯೆಂಬ ಅಧಿಕರಣದ್ವಿತೀಯಾಧ್ಯಾಯದಿಂದ ಸುಸ್ಪಷ್ಟವಾಗಿ ತಿಳಿದುಬರುವುದು. ಈತನೇ ತಾನು ಪರಮವೈಯಾಕರಣನೆಂದು ಪ್ರಕಟಿಸಿಕೊಂಡಿರುವನು. ಅಲ್ಲದೆ ಈತನು ತನ್ನ ಈ ವ್ಯಾಖ್ಯಾನದಲ್ಲಿ ಪಾಣಿನಿಯಸೂತ್ರಗಳನ್ನೇ ಹೆಚ್ಚಾಗಿ ತೆಗೆದುಕೊಂಡಿರುವನು. ಇದರಿಂದ ಕಾವ್ಯಾಲಂಕಾರಸೂತ್ರಪ್ರಣೇತೃವಾದ ವಾಮನನೇ ಕಾಶಿಕಾವೃತ್ತಿಯನ್ನು ಬರೆದವನೆಂದು ಸುಸ್ಪಷ್ಟವಾಗಿ ಊಹಿಸಬಹುದು. ಈ ವಿಷಯದಲ್ಲಿ ಪ್ರತಿಬಂಧಕವೇನೂ ಬಾರದಿದ್ದರೆ ಆಗ ಕ್ರಿಸ್ತಶಕದ ಏಳನೆಯ ಶತಮಾನದಲ್ಲಿ ಕಾವ್ಯಾಲಂಕಾರಸೂತ್ರಗಳ ನಿರ್ಮಾತೃವಾದ ವಾಮನನು ಪ್ರಾದುರ್ಭವಿಸಿದವನೆಂದು ನಿಶ್ಚಯಿಸಬಹುದು. ಇಟ್ಸಿಂಗ್—ಎಂಬ ಚೀನದೇಶದವನು ಕಾಶಿಕೆಯನ್ನು ಬರೆದಾತನು ಕ್ರಿಸ್ತಶಕದ ಆರುನೂರರುವತ್ತನೆಯ ವರ್ಷದಲ್ಲಿ ಮೃತಿಹೊಂದಿದನೆಂದು ಹೇಳಿರುವನು; ಅದರಿಂದ ಆತನಿಗಿಂತಲೂ ಪ್ರಾಚೀನನಾದುದರಿಂದ ಭಟ್ಟನಾರಾಯಣನು ಕ್ರಿಸ್ತಶಕದ ಆರನೆಯ ಶತಮಾನದಲ್ಲಿ ಅಥವಾ ಅದಕ್ಕೆ ಮುಂಚೆ ಹುಟ್ಟಿದವನೆಂದು ಸ್ಪಷ್ಟವಾಗುವುದು. ಇತರರು ಕಾವ್ಯಾಲಂಕಾರಸೂತ್ರಕಾರನಾದ ವಾಮನನು ಕಾಶಿಕಾಕಾರನಿಗಿಂತ ಬೇರೆಯೇ ಎಂದು ಹೇಳುವರು.

ಈತನು ಶ್ರೀಮತ್ಕಾಶ್ಮೀರಾಧಿಪತಿಯಾದ ಜಯಾಪೀಡನ ಮಂತ್ರಿಯೆಂದು "ಮನೋರಥಃ ಶಂಖದತ್ತಃ ಚಟಕಃ ಸಂಧಿಮಾಂಸ್ತಥಾ | ಬಭೂವುಃ ಕವಯಸ್ತಸ್ಯ ವಾಮನಾದ್ಯಾಶ್ಚ ಮನ್ತ್ರಿಣಃ ||" ಎಂಬ ರಾಜತರಙ್ಗಿಣೀ ಪದ್ಯದಿಂದ ತೋರುವುದೆನ್ನುವರು. ಜಯಾಪೀಡನೂ ಕ್ರಿಸ್ತಶಕದ ಏಳ್ನೂರೆಪ್ಪತ್ತೊಂಬತ್ತನೆಯ (೭೭೯) ವರ್ಷ ಮೊದಲ್ಗೊಂಡು ಎಂಟುನೂರು ಹದಿಮೂರನೆಯ (೮೧೩) ವರ್ಷದವರೆಗೆ ಭೂಮಿಯನ್ನಾಳಿದನೆಂದು ಚರಿತ್ರಜ್ಞರು ಹೇಳುವರು. ಆದರಿಂದ ಕ್ರಿಸ್ತಶಕದ ಎಂಟನೆಯ ಶತಮಾನದ ಉತ್ತರಭಾಗದಲ್ಲಿ ಅಥವಾ ಒಂಬತ್ತನೆಯ ಶತಮಾನದ ಆದಿಭಾಗದಲ್ಲಿ ವಾಮನನಿದ್ದನೆಂದು ಊಹಿಸುವರು. ಇದರಿಂದಲೂ ಕ್ರಿಸ್ತಶಕದ ಏಳನೆಯ ಶತಮಾನದಲ್ಲಿ ಅಥವಾ ಆದರ ಹಿಂದೆ ಭಟ್ಟನಾರಾಯಣನ ಜನನವೆಂದು ವ್ಯಕ್ತವಾಗುವುದು. ಮತ್ತೇನೆಂದರೆ ಜಯಾಪೀಡ ಮಹಾರಾಜನ ಮಂತ್ರಿಯಾದ ವಾಮನನೇ ಕಾವ್ಯಾಲಂಕಾರಸೂತ್ರಕಾರಣದ ವಾಮನನೆಂಬ ವಿಷಯದಲ್ಲಿ ಸ್ವಲ್ಪವಾದರೂ ಪ್ರಮಾಣದೊರೆಯುವುದಿಲ್ಲ. ಆದುದರಿಂದಲೇ ಈಯಭಿಪ್ರಾಯದಲ್ಲಿ ನಾವು ನಂಬುಗೆಯಿಡಲು ಸಾಧ್ಯವಲ್ಲ.

ಇತರರಾದರೋ ಅನುಮಾನಪ್ರಮಾಣದಿಂದಲೇ ವಾಮನನ ಕಾಲವನ್ನು ಸಾಧಿಸುವರು. ಅದೆಂತೆನೆ, ಸಮಾಸೋಕ್ತ್ಯಲಂಕಾರದಲ್ಲಿಯೂ ಆಕ್ಷೇಪಾಲಂಕಾರದಲ್ಲಿಯೂ ವ್ಯಂಗಕ್ಕಿಂತಲೂ ವಾಚ್ಯಾರ್ಥಕ್ಕೇ ಪ್ರಾಧಾನ್ಯವೆಂದು ಪ್ರತಿಪಾದಿಸಲಿಚ್ಛೆಯುಳ್ಳ ಧ್ವನ್ಯಾಲೋಕಕಾರನು ವಾಮನಮತದಿಂದ ಆಕ್ಷೇಪಕ್ಕೂ ಭಾಮಹಮತದಿಂದ ಸಮಾಸೋಕ್ತಿಗೂ ಉದಾಹರಣೆಯಾದ ಒಂದೇ ಪದ್ಯವನ್ನು ಉದಾಹರಿಸಿರುವನು. ಅದನ್ನು ಶ್ರೀಮದಭಿನವಗುಪ್ತನು ಧ್ವನ್ಯಾಲೋಕದ ಲೋಚನಾಖ್ಯವಾದ ವ್ಯಾಖ್ಯಾನದಲ್ಲಿ ವಾಮನಾಭಿಪ್ರಾಯದಿಂದ ಇದು ಆಕ್ಷೇಪಾಲಂಕಾರ, ಭಾಮಹಾಭಿಪ್ರಾಯದಿಂದ ಸಮಾಸೋಕ್ತಿ—ಎಂಬೀಯಭಿಪ್ರಾ

ಯುವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಸಮಾಸೋಕ್ತ್ಯಾಕ್ಷೇಪಗಳಿಗೆ ಈಯೊಂದೇ ಉದಾಹರಣೆಯನ್ನು ಗ್ರಂಥಕಾರನು ಕೊಟ್ಟಿರುವನೆಂದು ಸ್ಪಷ್ಟೀಕರಿಸಿರುವನು. ಅದರಿಂದ ಧ್ವನ್ಯಾಲೋಕಕಾರನಾದ ಶ್ರೀಮದಾನಂದವರ್ಧನಾಚಾರ್ಯನಿಗಿಂತಲೂ ಕಾವ್ಯಾಲಂಕಾರಸೂತ್ರಕಾರನಾದ ವಾಮನನು ಪ್ರಾಚೀನನೆಂದು ಚೆನ್ನಾಗಿ ವ್ಯಕ್ತವಾಗುವುದು.

ಶ್ರೀಮದಾನಂದವರ್ಧನಾಚಾರ್ಯನು ಕ್ರಿಸ್ತಶಕದ ಒಂಬತ್ತನೆಯ ಶತಮಾನದ ಉತ್ತರಭಾಗದಲ್ಲಿ ಅವನ್ತಿವರ್ಮರಾಜನು ಕಾಶ್ಮೀರದೇಶವನ್ನು ಪರಿಪಾಲಿಸುತ್ತಿರುವಾಗ ಪ್ರಾದುರ್ಭವಿಸಿದವನೆಂದು ರಾಜತರಂಗಿಣಿಯಿಂದ ತಿಳಿದುಬರುವುದು. ಅದರಿಂದ ಆತನಿಗಿಂತಲೂ ಕಾವ್ಯಾಲಂಕಾರಸೂತ್ರಕಾರನು ಅತ್ಯಂತ ಪ್ರಾಚೀನನೆಂಬುದರಲ್ಲಿ ಸಂಶಯವೇನೂ ಇಲ್ಲ ಈ ಕಾರಣದಿಂದ ಕ್ರಿಸ್ತಶಕದ ಎಂಟನೆಯ ಶತಮಾನದಲ್ಲಿ ಮೊದಲೆ ವಾಮನನ ಉತ್ಪತ್ತಿಯೆಂದು ನಂಬಲಾಗುವುದು. ಆತನು ವೇಣೀಸಂಹಾರದ ಪದ್ಯಗಳನ್ನು ಉದಾಹರಿಸಿರುವನು. ಅಶುದ್ಧಗಳೆಂದು ಭಾಸಿಸುವ ವೇಣೀಸಂಹಾರದ ಕೆಲವು ವಚನಗಳನ್ನು ತೋರಿಸಿ ಈ ರೀತಿ ಸಾಧುಗಳಾಗಿರಬೇಕೆಂದು ವ್ಯವಸ್ಥೆಯಿಂದ ಉಪಪಾದಿಸಿರುವನು. ಇದರಿಂದಲೂ ವಾಮನನ ಕಾಲದಲ್ಲಿ ಅತ್ಯಂತ ಪ್ರಚಾರದಲ್ಲಿದ್ದ ವೇಣೀಸಂಹಾರವನ್ನು ವಿದ್ವಾಂಸರು ಪ್ರಮಾಣವಾಗಿ ಅಂಗೀಕರಿಸಿದ್ದರೆಂದು ತೋರುವುದು. ಆರೀತಿಯಿಲ್ಲದಿದ್ದರೆ ವಾಮನನು ಈ ಪ್ರಯೋಗಗಳಿಗೆ ಶುದ್ಧತೆಯನ್ನು ಕಲ್ಪಿಸದೆ ದೋಷಪ್ರಕರಣದಲ್ಲಿಯೇ ಸೇರಿಸಿಬಿಡುತ್ತಿದ್ದನು. ಆದುದರಿಂದಲೇ ವಾಮನನಿಗಿಂತಲೂ ವೇಣೀಸಂಹಾರನಾಟಕಕಾರನಾದ ಭಟ್ಟನಾರಾಯಣನು ಅತಿಪ್ರಾಚೀನನಾದಕಾರಣ ಕ್ರಿಸ್ತಶಕದ ಏಳನೆಯ ಶತಮಾನದಲ್ಲಿ ಅಥವಾ ಅದಕ್ಕೆ ಹಿಂದೆಯೇ ಹುಟ್ಟಿದವನೇ ಹೊರತು ಎಂಟನೆಯ ಶತಮಾನಕ್ಕೆ ಈಚೆಯವನೆಂದಿಗೂ ಅಲ್ಲ.

ಪಾಶ್ಚಾತ್ಯಪಂಡಿತರಲ್ಲಿ—

ಶ್ರೀಯುತರಾದ "ಗ್ರೀಲ್" ಎಂಬವರು ಕ್ರಿಸ್ತಶಕದ ೧೮೭೧ ನೆಯ ವರ್ಷದಲ್ಲಿ ಮುದ್ರಿತವಾದ ವೇಣೀಸಂಹಾರದ ಉಪೋದ್ಘಾತದಲ್ಲಿ ಭಟ್ಟನಾರಾಯಣಕವಿಯು ಕ್ರಿಸ್ತಶಕದ ಆರನೆಯ ಶತಮಾನದಲ್ಲಿ ಹುಟ್ಟಿದವನೆಂದು ಹೇಳಿರುವರು.

ಶ್ರೀಯುತರಾದ "ವಿಲ್ಸನ್" ಎಂಬವರು ಹಿಂದುಗಳ ರಂಗಪೀಠ ಎಂಬ ಗ್ರಂಥದಲ್ಲಿ ಕ್ರಿಸ್ತಶಕದ ಎಂಟನೆಯ ಅಥವಾ ಒಂಬತ್ತನೆಯ ಶತಮಾನದಲ್ಲಿ ಶ್ರೀಭಟ್ಟನಾರಾಯಣನು ಇದ್ದನೆಂದು ಪ್ರಕಟಿಸಿರುವರು.

ಶ್ರೀಯುತರಾದ "ವೇಬರ್" ಎಂಬವರು ಕ್ರಿಸ್ತಶಕದ ಒಂಬತ್ತನೆಯ ಶತಮಾನಕ್ಕಿಂತಲೂ ಪ್ರಾಚೀನನು ಭಟ್ಟನಾರಾಯಣನೆಂದು ಇಷ್ಟುಮಾತ್ರವನ್ನೇ ಬರೆದಿರುವರು. ಇದು ಅವರು ಬರೆದಿರುವ "ಹಿಸ್ಟರಿ ಆಫ್ ಸ್ಯಾನ್‌ಸ್ಕ್ರಿಟ್ ಲಿಟರೇಚರ್" ಎಂಬ ಗ್ರಂಥದಲ್ಲಿದೆ.

ಕೇಂಬ್ರಿಡ್ಜ್ ವಿಶ್ವವಿದ್ಯಾಪೀಠದ ಸಂಸ್ಕೃತಾಧ್ಯಾಪಕರೆನಿಸಿದ ಶ್ರೀಯುತರಾದ ಮ್ಯಾಕ್ಡೊನಾಲ್ಡ್ ಎಂಬವರು ಸಂಸ್ಕೃತಸಾಹಿತ್ಯವೆಂಬ ಗ್ರಂಥದಲ್ಲಿ ಯಾವುದೋ ಒಂದು ತಾಮ್ರಶಾಸನವನ್ನು ಉದಾಹರಿಸಿರುವರು ಅದರಲ್ಲಿ ಭಟ್ಟನಾರಾಯಣನ ಹೆಸರನ್ನೂ ಎತ್ತಿರುವರು. ಈ ತಾಮ್ರಶಾಸನವು ಕ್ರಿಸ್ತಶಕದ ಎಂಟುನೂರು ನಾಲ್ವತ್ತನೆಯ ವರ್ಷದಲ್ಲಿ ನಿರ್ಮಿಸಲ್ಪಟ್ಟುದು ; ಅದರಿಂದ ಅದೇ ಸಮಯದಲ್ಲಿ ಭಟ್ಟನಾರಾಯಣ ಕವಿಯು ಇದ್ದನೆಂದು ನಿಸ್ಸಂದೇಹವಾಗಿ ಅಭಿಪ್ರಾಯಪಡುವರು. ಆದರೆ ಇವರು ತಮ್ಮ ಗ್ರಂಥದಲ್ಲಿ ಈ ತಾಮ್ರಶಾಸನವು ಎಲ್ಲಿ ದೊರೆಯಿತು ? ಇದನ್ನು ಯಾರು ಕೊಟ್ಟರು ? ಎಂಬಿದೆ ಮೊದಲಾದುದನ್ನು ಬರೆದೇ ಇಲ್ಲ. ಈ ತಾಮ್ರಶಾಸನದಲ್ಲಿ ಲಿಖಿತನಾಮನಾದ ಭಟ್ಟನಾರಾಯಣನೇ ವೇಣೀಸಂಹಾರಪ್ರಣೇತೃವೆಂಬ ವಿಷಯದಲ್ಲಿ ಪ್ರಮಾಣವೇನು ? ಆದುದರಿಂದಲೇ ಇದನ್ನು ಚೆನ್ನಾಗಿ ನಂಬಲು ಸಾಧ್ಯವಿಲ್ಲ. ಈ ತಾಮ್ರಶಾಸನದ ಅರ್ಥವಿದಲ್ಲವೆಂದು ಕೆಲವರು ಹೇಳುವರು.

ಇತರರಾದ ಭಾರತವರ್ಷೀಯರು—ಇಂತೆಂದಾಲಿಸಿ ಆ ಬ್ರಾಹ್ಮಣನೊಡನೆ ದೂತರನ್ನು ಕಳುಹಿ ಬಹುಮಾನಪುರಸ್ಸರವಾಗಿ, ಭಟ್ಟನಾರಾಯಣ ದಕ್ಷ ಶ್ರೀ ಹರ್ಷ ಚ್ಛಾಂಡವದೇವ ಗರ್ಭನಾಮಕರನ್ನು ಕರೆಯಿಸಿ, ಒಂಬಯ್ನೂರ ತೊಂಬತ್ತೊಂಬತ್ತನೆಯ ಶಕಾಬ್ದದಲ್ಲಿ ಮೊದಲೆ ಸಿದ್ಧಮಾಡಿದ್ದ ಪೀಠದಲ್ಲಿ ಕುಳ್ಳಿರಿಸಿದನು—ಎಂಬರ್ಥವುಳ್ಳ ಸಂಸ್ಕೃತ ಕ್ಷಿತೀಶವಂಶಾವಲಿ ಚರಿತ್ರದ ಪ್ರಥಮ ಪರಿಚ್ಛೇದದ ಗದ್ಯದಲ್ಲಿ ಆದಿಶೂರ ಭೂಪತಿವರ್ಣನ ಪ್ರಸ್ತಾವವಾಗಿ ಹೇಳಿರುವಕಾರಣ ವಂಗದೇಶೀಯನಾದ ಆದಿಶೂರಮಹೀಪತಿಯ ಸಮಕಾಲದವನೆನಿಸಿದ ಭಟ್ಟನಾರಾಯಣನು ಶಾಲಿವಾಹನಶಕದ ಹತ್ತನೆಯ ಶತಮಾನದಲ್ಲಿ ಅಥವಾ ಕ್ರಿಸ್ತಶಕದ ಹನ್ನೊಂದನೆಯ ಶತಮಾನದಲ್ಲಿ ಇದ್ದನೆಂದು ಹೇಳುವರು. ತಕ್ಕ ಪ್ರಮಾಣಗಳಿಲ್ಲದುದರಿಂದ ಇದೂ ಪರಿತ್ಯಾಜ್ಯವಾದುದೆಂದು ತಿಳಿಯತಕ್ಕುದು.

ಇತರರು ಕೇವಲ ಕ್ಷಿತೀಶವಂಶಾವಲೀ ಚರಿತ್ರದಿಂದ ಭಟ್ಟನಾರಾಯಣನು ಆದಿಶೂರಸಮಕಾಲಿಕನೆಂದು ನಂಬಿ ಆದಿಶೂರಭೂಪತಿಯೂ ಕ್ರಿಸ್ತಶಕದ ಏಳನೆಯ ಶತಮಾನದಲ್ಲಿ ಹುಟ್ಟಿದವನೆಂದು ಇತರ ಪ್ರಮಾಣಗಳಿಂದ ನಿಶ್ಚಯಿಸಿ ಕ್ರಿಸ್ತಶಕದ ಏಳನೆಯ ಶತಮಾನದಲ್ಲಿಯೇ ಭಟ್ಟನಾರಾಯಣನಿದ್ದನೆಂದು ಸಾಧಿಸಿರುವರು. ಈ ಕಾಲವೂ ಹಿಂದೆ ನಾವು ತೋರಿಸಿ ಸಾಧಿಸಿದ ಕಾಲವೂ ಒಂದೇ ಆಗಿರುವುದೆಂದು ತಿಳಿಯತಕ್ಕುದು.

ಶ್ರೀಯುತ ಮೋಕ್ಷಮೂಲರೆಂಬವರು— ಈ ಭಟ್ಟನಾರಾಯಣನು ಶ್ರೀಮದ್ಭಟ್ಟನಾರಾಯಣನ ಪ್ರಿಯಮಿತ್ರನೆಂದು ಹೇಳುವರು. ಈ ವಿಷಯದಲ್ಲಿ ಭಟ್ಟಪದವೊಂದಲ್ಲದೆ ಉಳಿದ ಪ್ರಮಾಣವಾವುದೂ ನಮಗೆ ದೊರೆತಿಲ್ಲ.

ಆದುದರಿಂದ ಈ ರೀತಿ ಕಾಶಿಕಾಕಾರನಾದ ವಾಮನನು ಕಾವ್ಯಾಲಂಕಾರಸೂತ್ರಕರ್ತೃವಾದ ವಾಮನನಿಗಿಂತಲೂ ಬೇರೆಯಲ್ಲವಾದರೆ

ಅವನು ಕ್ರಿಸ್ತಶಕದ ಏಳನೆಯ ಶತಮಾನದಲ್ಲಿ ಇದ್ದವನಾದಕಾರಣ ಅವನ ಗ್ರಂಥದಲ್ಲಿ ವೇಣೀಸಂಹಾರದ ವಚನಗಳನ್ನು ಉದಾಹರಿಸಿರುವುದರಿಂದ ಆ ಗ್ರಂಥದ ಕರ್ತೃವಾದ ಭಟ್ಟನಾರಾಯಣನು ಅವನಿಗಿಂತಲೂ ಪ್ರಾಚೀನನಲ್ಲದೆ ಕ್ರಿಸ್ತಶಕದ ಏಳನೆಯ ಶತಮಾನಕ್ಕೆ ಈಚೆಯವನಲ್ಲ

ಕಾವ್ಯಾಲಂಕಾರಸೂತ್ರಕಾರನು ಜಯಾಪೀಡನ ಸಭೆಯಲ್ಲಿದ್ದವನಾದರೆ ಜಯಾಪೀಡನು ಕ್ರಿಸ್ತಶಕದ ಎಂಟನೆಯ ಶತಮಾನದಲ್ಲಿ ಹುಟ್ಟಿದವನಾದುದರಿಂದ ಭಟ್ಟನಾರಾಯಣನೂ ಆಗಲೆ ಇದ್ದವನಲ್ಲದೆ ಎಂಟನೆಯ ಶತಮಾನದ ಈಚೆಯವನಲ್ಲ.

ಹಿಂದೆ ಹೇಳಿದಂತೆ ಪಾಶ್ಚಾತ್ಯಪಂಡಿತರ ಅಭಿಪ್ರಾಯವನ್ನು ವಿಮರ್ಶಿಸುವಲ್ಲಿ ಶ್ರೀಮದ್ಭಟ್ಟನಾರಾಯಣನು, ಗ್ರೀಲ್—ಎಂಬವರ ಅಭಿಮತದಲ್ಲಿ ಆರನೆಯ ಶತಮಾನದಲ್ಲಿದ್ದನೆಂದೂ, ವಿಲ್ಸನ್ ಎಂಬವರ ಮತದಲ್ಲಿ ಎಂಟನೆಯ ಅಥವಾ ಒಂಬತ್ತನೆಯ ಶತಮಾನದಲ್ಲಿದ್ದನೆಂದೂ, ವೇಬರ್ ಎಂಬವರ ಮತದಲ್ಲಿ ಎಂಟನೆಯ ಶತಮಾನಕ್ಕೆ ಈಚೆಯವನಲ್ಲವೆಂದೂ, ಮ್ಯಾಕ್ಡೊನಾಲ್ಡ್ ಎಂಬವರ ಮತದಲ್ಲಿ ಕ್ರಿಸ್ತಶಕದ ಒಂಬತ್ತನೆಯ ಶತಮಾನದವನೆಂದೂ ತಿಳಿಯಲಾಗುವುದು.

ವಾಸ್ತವಿಕವಾಗಿ ವೇಣೀಸಂಹಾರನಾಟಕಕರ್ತೃವಾದ ಶ್ರೀಮದ್ಭಟ್ಟನಾರಾಯಣಕವಿಯು ಎಂತೂ ಕ್ರಿಸ್ತಶಕದ ಏಳನೆಯ ಶತಮಾನಕ್ಕಿಂತಲೂ ಈಚೆಯವನಲ್ಲವೆಂದು ದೃಢವಾಗಿ ಹೇಳಬಹುದು. ಈ ವೇಣೀಸಂಹಾರವಲ್ಲದೆ ಆತನ ಗ್ರಂಥವಿನ್ನಾವುದೂ ಇದುವರೆಗೆ ನಮಗೆ ದೊರೆತಿಲ್ಲವಾದುದರಿಂದ ಈ ವಿಷಯದಲ್ಲಿ ಇನ್ನು ಹೆಚ್ಚಾಗಿ ಬರೆಯಲು ಸಾಧ್ಯವಿಲ್ಲವೆಂದು ಇಲ್ಲಿಗೆ ಉಪಸಂಹರಿಸಿರುವೆವು.

ವೆಂ. ಸೀ.





ಆಸ್ಥಾನಮಹಾವಿದ್ವಾನ್
ಯಂ. ಸೀತಾರಾಮಶಾಸ್ತ್ರಿಗಳು

ಶ್ರೀರಸ್ತು.

|| ಶ್ರೀರಾಮಜಯ ||

# ವೇಣೀಸಂಹಾರನಾಟಕಪ್ರತಿಕೃತಿ.



ಸಿರಿಯುರಸಂ ನಿಜನಾಭೀ |
ಸರಸಿಜಸಮುದಿತವಿರಂಚಿ ಜಗದಾಧಾರಂ ||
ಹರಿ ವಿಜಯಿಸುಗುಂ ನೈಜೋ |
ದರಗಹ್ವರನಿಹಿತನಿಖಿಲಜಗದಂಡನವಂ ||೧||

ಇಂಗಡಲ ನಡುವೆ ರಂಜಿಸು |
ಗುಂಗಡ ಬೇಱಾದದೊಂದುಕರ್ಗ್ಗಡಲೆನೆ ಭೌ ||
ಜಂಗಾಧಿಪತನುವೇಱು ಮ |
ಲಂಗಿದವಂ ವಿಷ್ಣು ಕೃಷ್ಣವಿಭು ವಿಜಯಿಸುಗುಂ ||೨||

ಪರಿಹೃತಮಾದೊಡಂ ಮುಸುಱಿ ಬಂಡೆೞೆದಾಡುವ ತುಂಬಿವಿಂಡಿನಿಂ|
ಪರಿವೃತಮುತ್ಫುಲ್ಲಮೊಳಗಿಂದುಕರಂ ತಱುಗಿಪ್ಪುರ್ವೆಂಬಿನಂ ||
ಹರಿಚರಣಂಗಳೊಳ್ ಪರೆಪಿದೀಕುಸುಮಾಂಜಲಿಯುಂಟುಮಾೞ್ಕೆ ತಾಂ |
ನೆರೆದ ಸಭಾಸದರ್ಕ್ಕಳಿವರಕ್ಷಿಗಳುಲ್ಲಸಿಪಂತೆ ಸಿದ್ಧಿಯಂ ||೩||

ಜಗುನೆಯ ತಣ್ಬೞಿಲ್ಗಳೆಡೆಯೊಳ್ ಮುನಿದೊಲ್ಲದೆ ರಾಸಕೇಳಿಯಂ |
ಮಿಗೆ ಪನಿ ಕಣ್ಗಳೊಳ್ ಗಮಿಪ ರಾಧೆಯ ಬೆಂಗೊಳುತಾಕೆಯಂಘ್ರಿಪಾ ||
ಳಿಗಳೊಳೆ ಪಜ್ಜೆಯಿಟ್ಟೊಗೆಯೆ ಪೊಂಪುೞಿ ಕಂಡೊಸೆದೋಪಳೀಕ್ಷಿಸಲ್ |
ಸೊಗಯಿಪ ಶೌರಿಯಾ ಅನುನಯಂ ಪರಿಪೋಷಿಕೆ ನಿಮ್ಮನೆಮ್ಮುಮಂ ||

ಪಿರಿದುಂ ಮುನ್ನಾವನಂ ಮುಪ್ಪೊೞಲುರಿಪುವನಂ ಗೌರಿಯೊಲ್ದೀನಿ
ದೆಂದಾ | ಸುರಿಯರ್ ಸಂಭ್ರಾಂತಿಯಿಂ ಬೆಚ್ಚುರ್ತೆ ದಯೆಗೊಳುತುಂ

ಶಾಂತಸುಜ್ಞರ್ ನಗುತ್ತುಂ || ಹರಿಯುಕ್ಕಿರ್ಕಂ ಕೊಂಡು ಕೈದಂ ವಧುಗಳ ಭಯಮಂ ತೂಳುತುಂ ದೈತ್ಯವೀರರ್ || ಸುರರಾನಂದಂಬಡುತ್ತುಂ ದರುಶಿಸಿದರವಂ ಶಂಭು ಪಾಲಿಕ್ಕೆ ನಿಮ್ಮಂ ||

**|| ನಾಂದ್ಯಂತದೊಳ್ ಸೂತ್ರಧಾರಂ ||**

**ಸೂತ್ರಧಾರಂ**—ಸಾಲ್ಗುಂ ಸಾಲ್ಗುಂ. ಅತಿಪ್ರಸಂಗದಿಂದೇಂ?

ಶ್ರವಣಾಂಜಲಿಗಳಿನೀಂಟಲ್ |
ಸವನಿಪ ಭಾರತಮೆನಿಪ್ಪ ಸುಧೆಯಂ ರಚಿಸಿ ||
ಪ್ಪರ್ವನಂ ರಾಗೋಜ್ಝಿತನಂ |
ಸುವಿಮಲನಂ ವ್ಯಾಸಮುನಿಪನಂ ವಂದಿಸುವೆಂ ||೬||

ಪೂಜ್ಯರಾದ ಸಾಮಾಜಿಕವರ್ಯರಿರ! ಅಂ ಬಿನ್ನವಿಪುದಿನಿಸಿರ್ಕ್ಕುಂ.

ಸಲಿಸಿದಪೆನಿಲ್ಲಿ ಕುಸುಮಾಂ |
ಜಲಿಯಿದು ಪೆಱತೊಂದೆನಿಪ್ಪುದಂ ರೂಪಕಮಂ ||
ಅಲಿಗಳ್ ಮಧುವಂ ಕಿಱಿದುಮು |
ನೊಲವಿಂ ಕೊಳ್ವಂತೆ ಕೊಳ್ವುದಣುವಂ ಗುಣವಂ ||೭||

ಮೃಗರಾಜಾಂಕನೆನಿಪ ಭಟ್ಟನಾರಾಯಣಕವಿಯ ಅಪೂರ್ವಮಾದ ವೇಣೀಸಂಹಾರಮೆಂಬ ನಾಟಕಮನೀಗಳ್ ಆಸ್ಥಾನಮಹಾವಿದ್ವತ್ಕವಿ ಮಹಿಶೂರಪುರೀಸೀತಾರಾಮಶಾಸ್ತ್ರಿ ಪೊಸತೆನೆ ಕನ್ನಡಿಸಿರ್ಕ್ಕುಂ. ಆಮಿದನಭಿನಯಿಸಲ್ ತೊಡಗಿರ್ಪೆವು. ಅದಱನಿತ್ತಲ್ ಕವಿ ಪರಿಶ್ರಮಿಸಿರ್ಪನೆಂಬುದಱಿಂದಮೊ, ಪೊಸನಾಟಕಮನವಲೋಕಿಸವೇಳ್ಕುಮೆಂಬ ಕುತೂಹಲದಿಂದಮೊ, ಉತ್ತಮನಾಯಕಕಥಾಗೌರವದಿಂದಮೊ, ನೀಮವಧಾನಮನೀಯವೇಳ್ಕುಮೆಂದು ಬೇಡಿದಪೆಂ. (ನೇಪಥ್ಯದೊಳ್) ಭಾವ, ತ್ವರೆಗೆಯ್ ತ್ವರೆಗೆಯ್. ಆರ್ಯವಿದುರನಾಣತಿಯಿಂದಿವರ್ಗಳೆಲ್ಲರುಂ ನಟರ್ಗಿಂತು ಪೇಳ್ಗುಂ—

ಆವುದುಮುೞಿದುದಿಲ್ಲೆಂಬಿನಂ ವಾದ್ಯವಿದ್ಯಾರಚನಾದಿವಿಧಾನಮೆಲ್ಲಮುಂ ಪೊಣ್ಮುಗೆ. ಭರತಕುಲಕ್ಕೆ ಹಿತಮೆಸಗಲ್ ದೂದೊಪ್ಪಿ ಬಿಜಯಂಗೆಯ್ದವಂ ಭಗವಂತಂ ದೇವದೇವಂ ದೇವಕೀನಂದನಂ ಚಕ್ರಪಾಣಿ ವ್ಯಾಸನಾರದಪರಶುರಾಮತುಂಬುರುಪ್ರಮುಖರ್ ಮಾಮುನಿಗಳ್ ಬೆಂಗೊಳೆ, ಮಹಾರಾಜದುರ್ಯೋಧನನ ಸಿವಿರಮಂ ಪುಗುವಪ್ಪೊತ್ತುಗಡಿದು.

**ಸೂತ್ರಧಾರಂ**—(ಕೇಳ್ದು, ಆನಂದದಿಂಕೂಡಿ) ಅಹಹ! ಎಲ್ಲಾಲೋಕಂಗಳ ಪುಟ್ಟುವೞಿವುಗಳ್ಗೆ ನಿಯಾಮಕನೆನಿಸಿದಂ ಭಗವಂತಂ ಮಾವಿಷ್ಣು ಕಂಸಾರಿ ಈಕುರುಪಾಂಡವರ ಸಮರಪ್ರಳಯಾಗ್ನಿಯಂ ಶಮನಂಗೊಳಿಸಲ್ಕೆ ಸಂಧಿಗೆಯ್ಯಲ್ ತಾನೆ ದೂದುಗೊಂಡು ಬಿಜಯಂಗೆಯ್ದು ಈಭರತಕುಲಮಂ ಮೇಣ್ ಸಕಲಮಂ ರಾಜಕುಲಮಂ ಅನುಗ್ರಹಿಸಿದಂ; ಆದೊಡಂ, ಎಲೆಪಾರಿಪಾರ್ಶ್ವಕ! ಕುಶಲರ್ ಕುಶೀಲವರ್ವೆರಸು ನೀನೇಕೆ ಗೀತಮನಿನ್ನುಮಾರಂಭಿಸೆ?

**ಪಾರಿಪಾರ್ಶ್ವಕಂ**—(ಪ್ರವೇಶಿಸಿ) ಆವರಿತುವನಧಿಕರಿಸಿ?

**ಸೂತ್ರಧಾರಂ**—ಬೆಳ್ದಿಂಗಳಱುಲ್ಗಳಿಂದಮುಂ ಕೊಂಚೆಯಂಚೆವಕ್ಕಿಗಳಿಂದಮುಂ ಏೞೆಲೆವಾೞೆಯಿಂ ಕುಸದಿಂ, ಕಾಸೆ ಬೆಳ್ನೆಯ್ದಿಲ್ ಬೆಳ್ದಾವರೆಮುಂತಪ್ಪ ಪೂಗಳಿಂದಮುಂ, ಬಾಂದೆಸೆಗಳ್ ಬೆಳರೆ, ಕೊಳಂಗಳ್ ಸವಿನೀರನೊಳಕೊಳೆ ರಯ್ಯಮಪ್ಪ ಶರದಮನಿದನೆ ಅಧಿಕರಿಸಿ ಗಾನಮೆಸಗು. ಅಂತುಗಡಾ ಈಶರತ್ಕಾಲದೊಳ್—

ವಿಲಸಿತಪಕ್ಷಯುತಂ ಮಂ |
ಜುಲಲಪಿತಂ ಮೇಣ್ ಪ್ರಸಾಧಿತಾಶಂ ಮದಸಂ ||
ಕಲಿತಕೃತಿ ಧಾರ್ತರಾಷ್ಟ್ರಂ |
ವಲಿ ಬೀೞ್ಗುಂ ಕಾಲವಶದೆ ಧರಣೀತಲದೊಳ್ ||೮||

**ಪಾರಿಪಾರ್ಶ್ವಕಂ**—(ಸಂಭ್ರಮಂಬೆರಸು ಕೊಡಂಕೆಗಳಂ ಬಾಸಣಿಸಿ) ಪಾಪಂ ಶಾಂತಮಕ್ಕೆ ಪಾಪಂ ಶಾಂತಮಕ್ಕೆ. ಅಮಂಗಲಂ ಪರಿಹೃತಮಕ್ಕೆ ಅಮಂಗಲಂ ಪರಿಹೃತಮಕ್ಕೆ.

**ಸೂತ್ರಧಾರಂ**—(ಅಚ್ಚರಿವೆರಸುನಗುತೆ) ಮಾರಿಷ ! ಶರದಮಂ ಬಣ್ಣಿಸವೇಟ್ಕುಮೆಂಬುದಱಿಂ ಅಂಚೆವಿಂಡಂ ಧಾರ್ತರಾಷ್ಟ್ರಾವಲಿಯೆಂದು ವ್ಯಪದೇಶಿಸಿದಪೆಂ. ಆದೇಂ "ಪಾಪಂ ಶಾಂತಮಕ್ಕೆ ಪಾಪಂ ಶಾಂತಮಕ್ಕೆ ಅಮಂಗಲಂ ಪರಿಹೃತಮಕ್ಕೆ ಅಮಂಗಲಂ ಪರಿಹೃತಮಕ್ಕೆ" ಎಂಬುದು ?

**ಪಾರಿಪಾರ್ಶ್ವಕಂ**—ಭಾವ ! ಆನಱಿಯದನಾದೆನಿಲ್ಲಂ ; ಆದೊಡೆ ನಿಮ್ಮಾಮಾತಿನೊಳಮಂಗಳಾಶಂಕೆಯಿಂದೆನ್ನೆದೆ ನಿಕ್ಕುವಂ ಝುಗ್ಗನೆ ಕಂಪಿಸಿದಂತಾಯ್ತು.

**ಸೂತ್ರಧಾರಂ**—ಮಾರಿಷ ! ತಾನೆ ದೂದಂ ಕೈಕೊಂಡನೆಂಬಿನಂ ತೆರಳ್ದು ಸಂಧಿಗೈವನಿಂ ಕಂಸಾರಿಯಿಂ ಅಮಂಗಲಮೆಲ್ಲಮುಮಿಾಗಳ್ ಪ್ರತಿಹತಮೇಗಡ ? ಅಂತಲ್ತೆ—

ಅರಿಸಂಹಾರದೆ ಶಾಂತಿಯಂ ಪಡೆಯೆ ವಿದ್ವೇಷಾಗ್ನಿ ಪಾಂಡುಕ್ಷಿತೀ |
ಶ್ವರಪುತ್ರರ್ ಸರಸೀರುಹಾಕ್ಷನೊಡನಾನಂದಂಬಡುತ್ತಿರ್ಕೆ ಮೇಣ್ ||
ಉರುರಕ್ತಪ್ರಸರಪ್ರಸಾಧಿತಮಿದಾಗಲ್ ಭೂತಳಂ ವಿಗ್ರಹಂ |
ಪಱಿಯಲ್ ಕೌರವರಾತ್ಮಭೃತ್ಯರೊಡನೆಲ್ಲರ್ ಸ್ವಸ್ಥರಾಗಿರ್ಕೆ ತಾಂ ||೯||

(ನೇಪಥ್ಯದೊಳ್ ಆಕ್ಷೇಪದಿಂ) ಆಃ ! ಎಲೆ ದುರಾತ್ಮ ! ವ್ಯರ್ಥಮಂಗಲಪಾಠಕ ! ನಟಾಧಮ ! "ಕುರುಸುತರ್ ಸೊಗಮಿರ್ಪರೆ ನಾಂ ಬರ್ದುಂಕಿರಲ್"

ಅರಗಿನ ಮಾಡದಲ್ಲುರಿಪಿ ಕೂರ್ವಿಸದನ್ನಮನಿಕ್ಕಿ ಮೇಣ್ ಸಭಾಂ |
ತರಕೆಟ್ಟಿದೀಟ್ದು ನಮ್ಮಸುಗಳಂ ಸಿರಿಯಂ ಮಿಗೆ ಸೂಱೆಗೊಂಡುಮೆ ||
ಮ್ಮರಸಿಯ ಸೀರೆಯಂ ಸೆಳೆದುಮಿಾಟ್ದಿಟ್ಟಿದಾಕೆಯ ಕೇಶಪಾಶಮಂ |
ದುರುಳರೆನಿಪ್ಪವರ್ಕುರುಸುತರ್ ಸೊಗಮಿರ್ಪರೆ ನಾಂ ಬರ್ದುಂಕಿರಲ್ ||

(ಸೂತ್ರಧಾರಪಾರಿಪಾರ್ಶ್ವಕರ್ ಕಿವಿಗೊಟ್ಟು ಕೇಳ್ವರ್)

**ಪಾರಿಪಾರ್ಶ್ವಕಂ**—ಭಾವ! ಇದೇಂ?

**ಸೂತ್ರಧಾರಂ**—(ಪಿಂತೀಕ್ಷಿಸಿ) ಆಹಹ! ವಾಸುದೇವಂ ಕುರುಸಂಧಾನಕೆ ಪೋದುದಂ ಸೈರಿಸದೆ ನಿಡುವಣೆಯೊಳ್ ಜವಹುರದ ಪೊಱವಾಗಿಲ ತಿಸುಳ್ಗಳಂತಗುರ್ವಿಪ ಪುರ್ವುಗಂಟುಗಳನಾಂತು ನೋಟದಿನೆಮ್ಮನೆಲ್ಲರಂ ಸರ್ರನೆ ಪೀರ್ದಪನೆಂಬಿನಂ ಕನಲ್ಕೆಗೊಂಡ ಭೀಮಸೇನನಿದೆ ಸಹದೇವನಿಂದನುಗಮ್ಯಮಾನನಾಗಿ ಇತ್ತಲೆ ಇದಿರ್ವಂದಪಂ; ಅದಱಿಂ ತಗದು ಕನಲ್ದೀತನಮುಂದಿರಲ್; ಅದುಕಾರಣಂ ನಾವಿತ್ತಬೇಱೆಡೆಗೆ ಪೋಪಂ.

(ಎಂದಿರ್ವರುಂ ತೆರಳ್ದರ್)

## ॥ ಇಂತಿದು ಪ್ರಸ್ತಾವನೆ ॥

(ಬೞಿಕೆ ಕನಲ್ದಂ ಭೀಮಸೇನಂ ಸಹದೇವನಿಂದನುಗಮ್ಯಮಾನನಾಗಿ ಪುಗುವಂ)

**ಭೀಮಂ**—ಆಃ! ಎಲೆ ದುರಾತ್ಮ! ವ್ಯರ್ಥಮಂಗಲಪಾಠಕ! ನಟಾಧಮ!

("ಅರಗಿನಮಾಡದಲ್ಲುರಿಪಿ" ಎಂಬಿದು ಮೊದಲಾದುದಂ ಮುನ್ನೆಂದುದನೆ ಪಠಿಸಂ)

**ಸಹದೇವಂ**—(ಅನುನಯದಿಂ) ಆರ್ಯ! ಸೈರಿಸು ಸೈರಿಸು. ಭರತಪುತ್ರನ ನುಡಿಯೆಮಗಭಿಮತಮೆಗಡ? ನೋಡು—

ಅರಿಸಂಹಾರದೆ ಶಾಂತಿಯಂ ಪಡೆಯೆ ವಿದ್ವೇಷಾಗ್ನಿ ಪಾಂಡುಕ್ಷಿತೀ |
ಶ್ವರಪುತ್ರರ್ ಸರಸೀರುಹಾಕ್ಷನೊಡನಾನಂದಂಬಡುತ್ತಿರ್ಕ್ಕೆ ಮೇಣ್ ||
ಉರುರಕ್ತಪ್ರಸರಪ್ರಸಾಧಿತಮಿದಾಗಲ್ ಭೂತಳಂ ವಿಗ್ರಹಂ |
ಪಱಿಯಲ್ ಕೌರವರಾತ್ಮಭೃತ್ಯರೊಡನೆಲ್ಲರ್ ಸ್ವಸ್ಥರಾಗಿರ್ಕ್ಕೆ ತಾಂ ||

ಕೌರವರ್ ಭೃತ್ಯರೊಡನೆ ನೆತ್ತರಿಂ ನೆಲಮನಲಂಕರಿಸುತ್ತುಂ ಒಡಲೞಿವಂ ಪಡೆದು ಸ್ವರ್ಗಸ್ಥರಕ್ಕೆ—ಎಂದು ನುಡಿದಪಂ.

**ಭೀಮಂ**—(ತಿರಸ್ಕಾರದೊಡನೆ) ನೀಂ ಕೌರವರ್ಗಮಂಗಳಂಗಳಂ ಬಗೆಯುತಕ್ಕವರಲ್ತಲ್ತು; ಆ ಭ್ರಾತರರೊಡನೆ ಸಂಧಿಗೈವುದು ನಿಮಗೆ ತಗುಗುಂ.

**ಸಹದೇವಂ**—(ಕೋಪಂಗೊಂಡು).

ಅಡಿಗಡಿಗಂ ವೈರಮನಿರ |
ದೊಡರಿಪ ಕೌರವರ ವಿಷಯದೊಳ್ ರಾಯನವಂ ||
ತಡೆಯಾಗಿ ಬಾರದೊಡೆ ನಿ |
ನ್ನೊಡವುಟ್ಟಿದನಾವನಹಹ ಸೈರಣೆಗೊಳ್ವಂ ||೧೧||

**ಭೀಮಂ**—(ಕ್ರೋಧದಿಂ) ಇದಿಂತು; ಇದಱಿಂದಮೆ ನಾಂ, ಇಂದು ಮೊದಲೆನೆ ನಿಮ್ಮತ್ತಣಿಂ ಬೇಱಿಯಾಗಿರ್ದಪೆಂ; ನೋಡು—

ಎನಗಿನ್ನುಂ ಬಾಲ್ಯಮೆಂಬಾಗಳೆ ಮಿಗೆ ಬಳೆದಾ ಕೌರವದ್ವೇಷ ಕೆವ್ಮಾ | ರ್ಯನವಂ ತಾಂ ಹೇತುವಲ್ತಾರಯೆ ವಿಜಯನುಮಲ್ತಲ್ತು ನೀವಿರ್ವರುಂ ಮ || ತ್ತನುವಿಂ ಕೂಡಿರ್ದುದಂ ಮುಂ ಮುಱಿದಪೊಲೆ ಜರಾಸಂಧನಾವಕ್ಷವಂ ಕಾ | ಯ್ವಿನಿಸೀಗಳ್ ಭೀಮಸೇನಂ ಬಿಡದೆ ಮುಱಿದಪಂ ಸಂಧಿಯುಂ ಕೂಡಿಸಿಂ ನೀಂ ||೧೨||

**ಸಹದೇವಂ**—(ಅನುನಯದಿಂ ಕೂಡಿ) ಆರ್ಯ! ಇಂತು ನೀಡುಂ ಕನಲ್ಕೆಯುಂ ತಾಳ್ದಿದ ನಿಮ್ಮ ವಿಷಯದೊಳ್ ಗುರುಪೆಂದಾನುಂ ಖೇದಂ ಗೊಳ್ವಂ.

**ಭೀಮಂ**—(ನಗುತೆ) ಏಂ ಗುರುವೆನ್ನ ವಿಷಯದೊಳ್ ಖೇದಂ ಗೊಳ್ವನೇ? (ಕೋಪದಿಂ) ವತ್ಸ! ಗುರು ಖೇದಮುಮಂ ಬಲ್ಲನೇ? ನೋಡು—

ಘನಸಭೆಯಲ್ಲಿ ನಮ್ಮರಸಿಯಾತೆಱನಾಂತುದನಂದು ಕಂಡೆವಾಂ |
ವನದೆ ಚಿರಂ ಪುಳಿಂದರೊಡನಿರ್ದೆವು ನಾರುಡೆಯುಟ್ಟು ಮೇಣ್ವಿರಾ ||

ಟನ ಮನೆಯಲ್ಲಿ ಗುಪ್ತದೆ ಕುವೃತ್ತಿಯೊಳಿರ್ದೆವು ಖೇದವಿಂತು ಖಿ |
ನ್ನನೆನಿಸಿದೆನ್ನೊಳೋ ಗುರುಗೆ ಕೌರವವೃಂದದೊಳಿನ್ನುಮಿಲ್ಲವೋ ||೧೩||

ಅದಱಿಂ ಮರಲ್ ; ಸಹದೇವ! ಒಟ್ಟನೊಳ್ ರಾಯಂಗೆ ಬಿನ್ನ ವಿಸ ಕೆನ್ನಂ ಬಳೆದ ಕಿನಿಸಿನಿಃ ಪಜ್ಜ್ವಳಿಪ ಭೀಮನ ನುಡಿಯಂ.

**ಸಹದೇವಂ**—ಆರ್ಯ! ಏನೆಂದು ?

**ಭೀಮಂ**—

ಇನಿತುಂ ನಿಮ್ಮಯ ಶಾಸನಾಂಬುವನದೇಂ ದಾಂಟಿರ್ದನೇ ರೀತಿವೆ |
ತ್ತನುಜಾತರ್ಕಳ ಮಧ್ಯದಲ್ಲಿಯುಮದೇಂ ನಾಂ ನಿಂದೆಗೀಡಾದೆನೇ ||
ಕಿನಿಸಿಂ ಜೃಂಭಿಸಿ ಕೆಂಪನೇಱೆ ಗದೆ ಕೆನ್ನೀರಿಂ ಕುರುಧ್ವಂಸಿಯು |
ಪ್ಪೆನಗಿಂದೊಂದುದಿನಂ ದಲಲ್ತು ಗುರು ನೀನಲ್ತಾಂ ಭವನ್ನಮ್ರನುಂ ||

(ಎಂದುದ್ಧತನಾಗಿ ಪೋಗಲುಮುಟ್ಟಿಪಂ)

**ಸಹದೇವಂ**—(ಅವನನೆ ಬೆಂಗೊಳುತೆ, ಆತ್ಮಗತಂ) ಆಃ ಇದೇಂ ಆರ್ಯಂ ದೇವಿಯ ನೆಲೆವೀಡಂ ಪೊಕ್ಕಪಂ! ಅಕ್ಕೆ; ಆನುಮಿಲ್ಲಿಯೆ ನಿಂದಪೆಂ. (ಎಂದು ನಿಂತಪಂ)

**ಭೀಮಂ**—(ಮರಲ್ದುಮೇಣ್ ನೋಡಿ) ಸಾದೇವ! ಪೋಗು ನೀಂ. ಗುರುಜನಮನನುವರ್ತಿಸು. ಆನುಮಾಯುಧಶಾಲೆಯಂ ಪೊಕ್ಕು ಆಯು ಧಮಂ ಕೈಕೊಂಡಪೆಂ.

**ಸಹದೇವಂ**—ಆರ್ಯ! ಇದಾಯುಧಶಾಲೆಯಲ್ತು ; ದೇವಿಯ ನೆಲೆವೀಡಿದು.

**ಭೀಮಂ**—ಏಂ ಇದಾಯುಧಶಾಲೆಯಲ್ತೊ? ದೇವಿಯ ನೆಲೆ ವೀಡೊ? (ಚಿಂತಿಸಿ) ಒಂದುಪಕ್ಷದೊಳ್ ಆಸೀದೇವಿಯಂ ಕಂಡಱಿಪಲೆ ವೇಳ್ಕುಂ (ಸಾದೇವನಂ ಕೈಯೊಳ್‌ಪಿಡಿದು) ಸಾದೇವ! ಆರ್ಯಂ ಕೌರವ ರೊಡನೆ ಸಂಧಿಗೈಯುವೇಳ್ಕುಮೆಂದೆಮ್ಮಂ ಪೀಡಿಸಿದಪಂ ಗಡಾ? ನೀನೆ ನೋಡ.

(ಇರ್ವರುಂ ಪೊಕ್ಕಂತಭಿನಯಿಪರ್)

**ಭೀಮಂ**—(ಕೋಪದಿಂ ನೇದೊಳ್ ಕುಳ್ಳಿರ್ಪಂ)

**ಸಹದೇವಂ**—(ಅಸವಸದಿಂ) ಆರ್ಯ! ಇದೆಕೊಳ್ ಇತ್ತಲಾಸನಂ ಪಾಸಿಕ್ಕುರ್ಗಂ. ಆರ್ಯನಿತ್ತ ಕುಳ್ಳಿರ್ದುರ್ದ ಕೃಷ್ಣಾಗಮನಮಂ ಪಾರ್ವುದು.

**ಭೀಮಂ**—ವತ್ಸ! ಕೃಷ್ಣಾಗಮನಮೆಂಬೀಪ್ರಸ್ತಾವದಿಂದಮೆ ನೆನೆಪಿಂಗೆ ಬಂದುದು. ಆರ್ಯಂ ಭಗವಂತನನಾಕೃಷ್ಣನಂ ಅದಾವ ಪಣದಿಂ ಸಂಧಿಗೆಯಲ್ ದುರ್ಯೋಧನನ ಬೞಿಗೆ ಬೞಿಯಟ್ಟಿದಂ ?

**ಸಹದೇವಂ**—ಆರ್ಯ! ಅಯ್ದುಂ ಗ್ರಾಮಂಗಳಿಂ.

**ಭೀಮಂ**—(ಕೊಡಂಕೆಗಳಂ ಮಡಿಕೆಗೈದು) ಅಕಟಕಟ! ರಾಯಂ ಗಜಾತಶತ್ರುವಿಂಗೆ ಇಂತೀತೇಜೋಹಾನಿಯೆಂದೊಡೆ ನನ್ನಿಯಿಂ ನನ್ನೆರ್ದೆ ಕಂಪಿಸಿದಂತಕ್ಕುಂ (ಮೊಗಂದಿರುಪಿ) ವತ್ಸ! ಆನುಡಿಯಂ ನೀಂ ನುಡಿದುದಿಲ್ಲ; ಆಂ ಕೇಳ್ದುದುಮಿಲ್ಲ.

ಈಕ್ಷಿತಿಪತಿಯೊಳ್ ನೀಡುಂ |
ರೂಕ್ಷತರಂ ಕ್ಷಾತ್ರಮಾವುದಿರ್ದುದೊ ತೇಜಂ ||
ಅಕ್ಷಕ್ರೀಡೆಯುನೆಸಗು |
ತ್ತಾಕ್ಷಣದಲ್ಲಂದು ಕಳೆದನದುಮಂ ನಿಸದಂ ||೧೫||

(ನೇಪಥ್ಯದೊಳ್) ಭಟ್ಟನಿ! ಸಮಾಧಾನಂಗೊಳ್ವುದು ಸಮಾಧಾನಂಗೊಳ್ವುದು.

**ಸಹದೇವಂ**—(ಕೇಳ್ದು, ನೇಪಥ್ಯದತ್ತಲ್ ನೋಡಿ, ಸ್ವಗತಂ) ಆಃ! ಇದೇಂ? ಈದೇವಿಯಡಿಗಡಿಗಂ ತುಂಬಿತುಳುಂಕುತಿರ್ಪ ಕಣ್ಬನಿಗಡಣದಿಂ ಕೂಡಿ ಆರ್ಯನಂ ಬೞಿಸಾರ್ದಳ್; ಇದಱಿಂದತಿಕಷ್ಟಮೊದವಿದತ್ತುಗಡ ?

ಮುಸಗುತೆ ಕೋಪದಿನಾರ್ಯನೊ |
ಳೆಸೆದಪುದೋ ಮಿಂಚಿನಂತದಾವುದು ತೇಜಂ ||

ನಿಸದಮಿದಂ ನೀಡುಂ ಪೆ |
ರ್ಚಿಸುವಳ್ ಮರ್ಮತ್ರ್ವಮಂತೆ ಪಾಂಚಾಲಿಯಿವಳ್ ||೧೬||

(ಬಲಿಕೆ ಆರೀತಿಯುಳ್ಳ ದ್ರೌಪದಿ ಚೇಟಿವೆರಸು ಪೊಕ್ಕಪಳ್)

**ದ್ರೌಪದಿ**—(ಕಣ್ಣನಿದುಂಬಿ) ನೀಡುಂ ಸುಯ್ವಳ್.

**ಚೇಟಿ**—ಸಮಾಧಾನಂಗೊಳ್ ಸಮಾಧಾನಂಗೊಳ್ ; ಕೌರವ ಗ್ರಂದುಂಪಗೆವ ಕುಮಾರಭೀಮಸೇನಂ ನಿನ್ನ ದುಗುಡಮಂ ತೊಳ್ದಪಂ.

**ದ್ರೌಪದಿ**—(ನೀಡುಂ ಸುಯ್ದು) ಸಖಿ ! ಇದಕ್ಕುಂ ; ಮಾರಾಯಂ ಪ್ರತಿಕೂಲನಾಗದೊಡೆ.

**ಚೇಟಿ**—ಇದೆ ಕುಮಾರನಿಲ್ಲಿರ್ದಪಂ; ಅದಱಿಂ ಭಟ್ಟಿನಿಯಿಾತನಂ ಬಳಿಸಾರ್ವುದು.

**ದ್ರೌಪದಿ**—ಸಖಿ ! ಇಂತು ಮಾಳ್ಪಂ. (ಎಂದವಳೊಡನೆ ಬಳಿಸಾರ್ದಪಳ್.)

**ಚೇಟಿ**—(ಮುಂಬಂದು) ಕುಮಾರಭೀಮಸೇನಂಗೆ ಜಯಮಕ್ಕೆ.

**ಭೀಮಂ**—(ಕೇಳದೆ—ಈ ಕ್ಷಿತಿಪತಿಯೊಳ್ ನೀಡುಂ ಎಂಬುದಂ ಪಠಿಪಂ)

**ಚೇಟಿ**—ಕುಮಾರಂ ಕನಲ್ದನಂತೆ ಕಾಣ್ಗುಂ.

**ದ್ರೌಪದಿ**—ಚೇಟಿ ! ಇಂತಿರ್ದೊಡೆ ಈಯೇಳಿದಮುಮೆನ್ನಂ ಸಂತವಿಡುಗುಂ. ಅದಱಿಂ ಪತ್ತೆಸಾರ್ದು ಆರ್ಯಪುತ್ರನ ಉಜ್ಜುಗಮಂ ಕಿವಿಯಿಂ ಕೇಳ್ದಪೆಂ. (ಎಂದು ಅಂತುಮಾಳ್ಪಳ್)

**ಭೀಮಂ**—(ಕ್ರೋಧದಿಂ) ವತ್ಸ ! ಏಂ ಅಯ್ದುಂ ಗ್ರಾಮಂಗಳಿಂದೆ ಸಂಧಿ ?

ಧುರದೊಳ್ ಕ್ರೋಧದಿನಾನದೇಂ ಕಡಿಯೆನೇ ಕೌರವ್ಯರಂ ನೂರ್ವರಂ | ಭರದಿಂದಂ ಬಿಸುನೆತ್ತರಂ ಕುಡಿಯೆನೇ ದುಶ್ಶಾಸನೋರಸ್ಸ್ಥಮಂ || ಕುರುಪೋರುದ್ವಯಮಂ ಗದಾಪ್ರಹೃತಿಯಿಂ ಸಂಚೂ

ರ್ಣವಂ ಗೆಯ್ಯೆನೇ | ಅರರೇ ನಿಮ್ಮಯ ರಾಯನಿಂದು ಪಣದಿಂ ಸಂಧಾನಮಂ ಮಾಟ್ಕೆ ತಾಂ ||೧೭||

**ದ್ರೌಪದಿ**—(ಸಂತಸಂಗೊಂಡು, ಜನಾಂತಿಕಂ) ಎಲೆಪ್ರಿಯ! ಇಂತಪ್ಪುದಂ ಪ್ರಿಯವಚನಮನಾಂ ಮುನ್ನೆಂದುಂ ಕೇಳ್ದಿನಿಲ್ಲ. ಆದಱನಿನ್ನೊರ್ಮೆ ಪೇೞ್.

**ಭೀಮಂ**—ವತ್ಸ ಸಾದೇವ! ನೋಡು—"ಧುರದೊಳ್ ಕ್ರೋಧದಿನಾನದೇಂ" (ಎಂದು ಮತ್ತೆ ನುಡಿವಂ)

**ಸಹದೇವಂ**—ಆರ್ಯ! ಆದೊಡೆ ಮಹಾರಾಜಂ ಪೇೞ್ದಟ್ಟಿದ ಸಂದೇಶಮನಿದಂ ಆರ್ಯಂ ಅಪಾರ್ಥತೆಯಿಂದಮೇ ಗ್ರಹಿಸಿದುದಾಯ್ತು.

**ಭೀಮಂ**—ಆದೊಡಿದಱ ಗ್ರಾಹ್ಯಮಾದರ್ಥಮೇಂ?

**ಸಹದೇವಂ**—ಆರ್ಯಂ ದುರ್ಜ್ಯೋದನಂಗಿಂತು ಪೇೞ್ದಟ್ಟಿದಂ; ಎಂತೆನೆ—

ಎಮಗೂರ್ಗಳನಿಂದ್ರಪ್ರ |
ಸ್ಥಮಂ ವೃಕಪ್ರಸ್ಥಮೆಂಬುದಂ ನೀಡು ಜಯಂ ||
ತಮನಂತು ವಾರಣಾವತ |
ಮುಮನಯ್ದನೆಯದನದಾವುದೊಂದನೊ ಕುಡು ನೀಂ || ಎಂದು.

ಇಂತು ಓರೊಂದುಂ ಗ್ರಾಮದ ಪೆಸರನುಸಿರ್ದು ಬೇಡಿಪುದಱಿಂ ಮತ್ತಮಯ್ದನೆಯದಱದನುಸಿರದಿಪುದಱಿಂ ಬಿಸಗೂಟ್ ಅಲತಗೆವನೆ ಜೂದು ಸಭೆಯ ಪುಗುತೆ ಮುಂತಪ್ಪಪಕಾರಂಗಳ ತಾಣಂಗಳಂ ಉದ್ಘಾಟಿಸಿದಂತೆಯೆ ಆದತ್ತೆಂದಱಿವೆವು.

**ಭೀಮಂ**—(ಆಟೋಪದಿಂ) ವತ್ಸ! ಇಂತೆಸಗಿಮದಱನೇನೆಸಗಿದುದಕ್ಕುಂ?

**ಸಹದೇವಂ**—ಆರ್ಯ! ದಾಯಾದರ್ಗೆ ಕೇಡಂ ಬಗೆವ ಬಗೆಯು ಬಗೆ ಲೋಕದೊಳ್ ಪ್ರಕಟಿತಮಕ್ಕುಂ; ಕೌರವರಾಜಂ ಸಂಧಿಗೆ ತಗದನೆಂಬುದುಂ ತೋಱುದುದಕ್ಕುಂ.

**ಭೀಮಂ**—ನಿರರ್ಥಮಿವೆರಡುಂ ; ಎಂದಾವೆಲ್ಲರುಮಿತ್ತಲ್ ವನಮನೆಯ್ದುತ್ತುಂ ಕುರುಕುಲಧ್ವಂಸಮಂ ಪೂಣ್ದೆವೋ ಆ ಕೌರವರ್ ಸಂಧಿಗೆ ತಗದರೆಂಬುದಂದೆ ಅಱಿಪಿದುದಾಯ್ತು. ಲೋಕದೊಳ್ ಧಾರ್ತರಾಷ್ಟ್ರಕುಲಕ್ಷಯಮೆಂಬುದುಂ ಪ್ರಸಿದ್ಧಂ.

**ಸಹದೇವಂ**—(ನಾಣನಭಿನಯಿಪಂ).

**ಭೀಮಂ**—ನಿಮಗಿದು ಲಜ್ಜಾಕರವೋ? ಅದಲ್ಲದೆಯುಂ, ಎಲೆ ಮೂಢ!

ಅರಿಕುಲಮಂ ಕ್ರೋಧದೆ ಸಂ |
ಹರಿಪುದು ಜಗದಲ್ಲಿ ನಿಮ್ಮನದು ನಾಣ್ಚಿಸುಗುಂ ||
ಅರರೇ ನಾಣ್ಚಿಸದು ಸಭಾಂ |
ತರದೊಳ್ ಸಮುನಿಸಿದ ಸತಿಯ ಕೇಶಾಕರ್ಷಂ ||೧೯||

**ದ್ರೌಪದಿ**—ಆರ್ಯಪುತ್ರ! ಇವರ್ಗೆ ನಾಣಿಲ್ಲಂ; ನೀನಾದೊಡಂ ಮಱೆಯದಿರ.

**ಭೀಮಂ**—ವತ್ಸ! ದೇವಿಯದೇಕೆ ತಳ್ವಾಗುಂ?

**ಸಹದೇವಂ**—ಬಟ್ಟಿಸಾರ್ದಳ್ಗೆ ಮಾನ್ಯೆಗೆ ಕಾಲಮೆನಿತ್ತೊ ಕಳೆದತ್ತು. ಆದೊಡೆ ಆರ್ಯಂ ಕೋಪಾವೇಶವಶನಾದುದಱಿಂ ಬಟ್ಟಿಸಾರ್ದಳುಮಂ ಕಂಡನಿಲ್ಲಂ.

**ಭೀಮಂ**—(ದ್ರೌಪದಿಯಂ ಕಂಡು ಅಟ್ಟಿಯಿಂ) ದೇವಿ! ಮಹಾಕ್ರೋಧಕಡಪಾದನಾಂ ಬಂದಳುಮಂ ನಿನ್ನಂ ನೋಡಿದೆವಿಲ್ಲಂ. ಇನಿತರ್ಕೆ ನೀಂ ಮುನಿವುದಾಗದು.

**ದ್ರೌಪದಿ**—ನಲ್ಲನೆ! ಮುನಿಸು ಉದಾಸೀನರೊಳ್ ; ಕನಲ್ವರೊಳ್ ನಿಮ್ಮೊಳಲ್ತು.

**ಭೀಮಂ**—ಇಂತಿರ್ದೊಡೆ ನಿನ್ನ ಪರಿಭವಂ ಪೋದುದೆಂದೆ ತಱಿಸಲ್.

**ದ್ರೌಪದಿ**—(ದುಗುಡದಿಂದೆ ನೀಡುಂ ಸುಯ್ವಳ್).

**ಭೀಮಂ**—(ಕೈವಿಡಿದು ಪಕ್ಕದೊಳ್ ಕುಳ್ಳಿರಿಸಿ ಮತ್ತಂ ಮೊಗಮಂ ನೋಡಿ) ಇದೇಂ ನೀಂ ಪಿರಿದುಮುಬ್ಬೆಗಂಗೊಂಡಿರ್ಪಳಂತೆ ಕಾಣ್ಬೆ ?

**ದ್ರೌಪದಿ**—ಇನಿಯ! ನೀಂ ಪತ್ತೆಸಾರ್ದಿರ್ಪಿನಂ ಉಬ್ಬೆಗಂಗೊಳಲ್ ಕಾರಣಮೇನುಮಿರದು.

**ಭೀಮಂ**—ಅದೇಕೆ ನೀನಱಪೆ? (ಕೇಶಪಾಶಮಂ ನೋಡಿ) ಒಂದು ಪಕ್ಷದೊಳ್ ಅಱಿಪಿದುದಱಿಂದೇಂ? ಏಕೆನೆ,

ಬಾವಿಯೊಳ್ ಬರ್ದುಕಿರೆ ದೂರ |
ಪ್ರವಾಸಮೆಸಗದಿರೆ ಪಾಂಡುರಾಜಕುಮಾರರ್ ||
ಅವತೆಯನಿಂತಪ್ಪುದನನು |
ಭವಿಸುತುಮಿರ್ಪೆಗಡ ದುಪದರಾಯನ ಸುತೆ ನೀಂ ||೨೦||

**ದ್ರೌಪದಿ**—ಚೇಟಿ! ಬುದ್ಧಿಮತಿಕೆ! ಬಿನ್ನವಿಸ ನಲ್ಲಂಗೆ; ಈತ ನಲ್ಲ ಪೆಱನಾವನೆನ್ನೇಳಿದಕ್ಕೆ ಮುಮ್ಮಲಮಱುಗುವಂ?

**ಚೇಟಿ**—ದೇವಿ ಬೆಸಸಿದಂತಕ್ಕೆ (ಭೀಮನಂ ಬಱಸಾರ್ದು ಬದ್ಧಾಂಜಲಿಯಾಗಿ) ಕುಮಾರ! ದೇವಿಯು ಅದವಟಲ್ಗೆ ಈಗಳಿನದರ್ಕ್ಕಂ ಪಿರಿದೆನಿಪ ಕಾರಣಮಿನ್ನೊಂದೊದವಿದತ್ತು.

**ಭೀಮಂ**—ಅದೇಂ ಈಗಳಿನದರ್ಕ್ಕಂ? ಅದಂ ಪೇೞ್ ಪೇೞ್.

ಕುರುವಂಶಕೆ ನಾಂ ಕಿಚ್ಚಿನಿ |
ಸಿರೆಯಿವಳಂ ಮುಕ್ತವೇಣಿಯಂ ಕೃಷ್ಣೆಯನಂ ||
ತರದುರಿವ ಧೂಮಶಿಖೆಯಂ |
ಸ್ಪರುಶಿಪವೋಲ್ ಸೋಂಕಿ ಶಲಭವೆನಿಪವನಾವೊಂ ||೨೧||

**ಚೇಟಿ**—ಕೇಳ್. ಇಂದು ದೇವಿ ಮಾತೆವೆರಸು ಸುಭದ್ರೆಯುಂ ತಪ್ಪ ಸವತಿಯರುಂ ಕೂಡಿವರೆ, ಆರ್ಯೆ ಗಾಂಧಾರಿಯ ಪಾದವಂದನೆಯ ನೆಸಗಲ್ ಪೋದಳ್.

**ಭೀಮಂ**—ಇದು ತಗುಗುಂ. ಪಿರಿಯರ್ ಅಭಿವಂದನೀಯರಲ್ತೆ? ಬಟಿಕೆ ಬಟಿಕೆ?

**ಚೇಟಿ**—ಬಟಿಕೆ ಮರಲ್ವಂದು ದೇವಿ ಭಾನುಮತಿಯ ಕಣ್ಗೆ ವಂದಳ್.

**ಭೀಮಂ**—(ಕೋಪದಿಂ) ಆಃ! ಅದೆಂತು ಪಗೆವಡದಿಯ ಕಣ್ಗೆ ವಂದಳ್? ಅಹಹ! ಇದು ಕೋಪಕ್ಕೆಡೆ. ಬಟಿಕಂ ಬಟಿಕಂ?

**ಚೇಟಿ**—ಬಟಿಕವಳ್ ಕೆಳದಿಯರಂ ನೋಡುತ್ತೆ ದೇವಿಯಂ ಕಂಡು ಬಿಂಕದಿಂ ನಸುನಕ್ಕು ನುಡಿದಳ್.

**ಭೀಮಂ**—ಕಂಡುದೆಅಲ್ತು? ನುಡಿಯುಮಂ ನುಡಿದಳೇ? ಅದೇನೆಂದು?

**ಚೇಟಿ**—"ಎಲೆ ಪಾಂಚಾಲಿ! ನಿನ್ನ ಪತಿಗಳಯ್ದುಂ ಗ್ರಾಮಂಗಳಂ ಬೇಡಿದಪರ್; ಬಿಚ್ಚಿರ್ದಕುರುಳ್ಗಳನೀಗಳುಂ ನೀನದೇಕೆ ಕಟ್ಟದಿರ್ದಪೆ?" ಎಂದು.

**ಭೀಮಂ**—ಸಾದೇವ! ಕೇಳ್ದೆಯಾ?

**ಸಹದೇವಂ**—ಆರ್ಯ! ಈವಿಷಯದೊಳ್ ಪೇಬ್ವುದೇಂ? ಇದವಳ್ಗುಚಿತಮೆವಲಂ. ಏಕೆನೆ, ಆವಳ್ ದುರ್ಯೋಧನನ ಮಡದಿಯಲ್ತೆ? ನೋಡು—

ಸತಿಯುಗ್ರ್ಗೆ ಸಾಹಚರ್ಯದೆ |
ಪತಿಸದೃಶಮೆನಿಪ್ಪುದಲ್ತೆ ಚಿತ್ತಂ ಜಗದೊಳ್ ||
ಅತಿಮಂಜುಲಮೆನಿಸುವೊಡಂ |
ಲತೆ ವಿಷತರುಸಂಗದಿಂದೆ ಮೂರ್ಛೆಗೊಳಿಕ್ಕುಂ ||೨೨||

**ಭೀಮಂ**—ಬುದ್ಧಿಮತಿಕೆ! ಅದಕ್ಕೆ ದೇವಿಯೇವೇಳ್ದಳ್?

**ಚೇಟಿ**—ಕುಮಾರ! ಪರಿಜನವಿಲ್ಲದೊಡಲ್ತೆ ದೇವಿಯಾಗಳ್ ಪೇಬ್ಗುಂ.

**ಭೀಮಂ**—ಆದೊಡೆ ನೀನೇವೇಟ್ದಿ ?

**ಚೇಟಿ**—ಕುಮಾರ ! ಆನಿಂತು ಪೇಟ್ದಿಂ :—ಎಲೆ ಭಾನುಮತಿ ! ನಿಮ್ಮ ಕುರುಳ್ಗಳ್ ಬಿಚ್ಚಿರ್ದಿರಲೊಡಂ ಅದೆಂತು ಎಮ್ಮ ದೇವಿಯ ಕುರುಳ್ಗಳ್ ಕಟ್ಟುಗುಂ? ಎಂದು.

**ಭೀಮಂ**—(ಸಂತಸದಿಂ) ಸಾಧು ಬುದ್ಧಿಮತಿಕೆ! ಸಾಧು. ಎಮ್ಮ ಪರಿಜನಂ ಪೇಳ್ವನುಡಿಯುಂ ಪೇಟ್ದಿ (ಎಂದು ತನ್ನ ತೊಡಂಗೆಳಂ ಬುದ್ಧಿಮತಿಕೆಗೆ ಕೊಟ್ಟಪಂ—ದ್ರೌಪದಿಯುಂ ನೋಡಿ) ಎಲೌ ಮಾನ್ಯೆ ಪಾಂಚಾಲರಾಜಕನ್ಯೆ ! ಪಲವಾತಿನೇಂ? ಆಲಿಸ; ಇನ್ನಲ್ಪಕಾಲದೊಳೇ—

ಚಲಿತೋದ್ವೃತ್ತಭುಜಂಗಳಿಂ ತಿರುಪಿ ಪೊಯ್ವುದ್ಯದ್ಗದಾದಂಡದಿಂ |
ದಲಿತೋರುದ್ವಯನಾದ ಕೌರವನ ಗಾಢವ್ಯಾಪ್ತದಿಂ ರಕ್ತದಿಂ ||
ಸಲೆ ಚೆಂಬಣ್ಣಮನಾಂತು ರಂಜಿಸಿದ ಪಾಣಿದ್ವಂದ್ವದಿಂ ಭೃಂಗಕುಂ |
ತಲೆಯೇ ನಿನ್ನಯ ಕೇಶಪಾಶಮನಿದಂ ಭೀಮಂ ವಲಂ ಕಟ್ಟುವಂ||೨೩||

**ದ್ರೌಪದಿ**—ಆರ್ಯಪುತ್ರ ! ನೀಂ ಕನಲ್ದೊಡೆ ಅದಾವುದು ಗೆಯಲಾಗದು? ಆದೊಡೆ ನಿನ್ನೀತಜುಸಲವಂ ನಿನ್ನೊಡವುಟ್ಟಿದರುಮೊಪ್ಪವೇಟ್ಕುಂ.

**ಸಹದೇವಂ**—ಇದೆಮಗೆ ಸಂತಸಮೇಗಡ ?

(ನೇಪಥ್ಯದೊಳ್ ಪಿರಿದುಂ ಕಲಕಲಮುಕ್ಕುಂ; ಎಲ್ಲರುಂ ಬೆಕ್ಕಸಂಬಡುತ್ತಾಲಿಸುವರ್).

**ಭೀಮಂ**—(ಹರಿಸಂಗೊಂಡು).

ಕಡೆಯುಲ್ ಕ್ಷುಬ್ಧಂ ಕಡಲ್ನೀರಡಸೆ ಚಲಿಸಿದಾಮಂದರಂಬೊಲ್ಗಭೀರಂ | ಕಡು ಕೋಣಾಘಾತಮುಣ್ಮಲ್ಮೊಟಗಿ ಮಸೆವ ಕಲ್ಪಾಬ್ದದಂತುದ್ಧತಂ ಮುಂ || ಗಡೆ ಸಾರ್ವಾಳ್ ದ್ರೌಪದೀಕ್ರೋಧಕೆ ಕುರುಶತಕುತ್ಪಾತಸಂಸೂಚಕಂ ಕೂ | ರ್ಸಿಡಿಲಸ್ಮತ್ಸಿಂಹನಾದಪ್ರತಿರವಮೆನಿಪೀ ಭೇರಿಯುಂ ಪೊಯ್ವನಾವೊಂ ||೨೪||

(ಬಟಿಕೆ ಕಂಚುಕಿ ಸಂಭ್ರಾಂತನಾಗಿ ಪೊಕ್ಕಪಂ)

**ಕಂಚುಕಿ**—ಕುಮಾರ! ಪಾಂಡವಪಕ್ಷಪಾತವಂ ಕಂಡು ಕುಪಿತನಾದ ಕೌರವರಾಜಂ ಇದೆ ಭಗವಂತನಂ ಕೃಷ್ಣನಂ ಕಟ್ಟಲ್ ತೊಡಗಿದಂ.

**ಎಲ್ಲರುಂ**—(ಸಂಭ್ರಾಂತಿಗೊಂಡಪರ್).

**ಭೀಮಂ**—ಕಟ್ಟಿದನೇಂ?

**ಕಂಚುಕಿ**—ಇಲ್ಲವಿಲ್ಲಂ; ಕಟ್ಟಲ್ ತೊಡಗಿದಂ.

**ಭೀಮಂ**—ಬೞಿಕಂ ದೇವನೇಗೆಯ್ದಂ?

**ಕಂಚುಕಿ**—ಬೞಿಕಮಾಮಹಾಮಹಿಮಂ ತನ್ನ ಮೆಱೆದ ವಿಶ್ವರೂಪದ ತೇಜದಿಂ ಹಮ್ಮೈದಂಬೋದ ಕುರುಬಲಮಂ ಕಡೆಗಣ್ಚಿ ಎಮ್ಮ ಸಿವಿರಕ್ಕೆ ನಡೆತಂದಂ; ಅದಱಿಂದೆ ದೇವಂ ಕುಮಾರನಂ ತಳ್ವದೆ ನೋಡಲಾಟಿಪಂ.

**ಭೀಮಂ**—(ನಕ್ಕು) ಆದುರಾತ್ಮಂ, ಭಗವಂತನಂ ವಾಸುದೇವನಂ ಕಟ್ಟಲುಜ್ಜುಗಿಸಿದನೇ? (ಮೇಲೆ ನೋಡಿ) ಆಃ! ಎಲೆ ಕುರುಕುಲಾಧಮಾ! ಇಂತು ಮರ್ಯ್ಯಾದೆಮೀಱಿ ನಡೆದ ನಿನ್ನ ವಿಷಯದೊಳ್ ಪಾಂಡವರ ಕನಲ್ಕೆ ನಿಮಿತ್ತಮಾಗಿರ್ದೊಡೆ ಸಾಲ್ಗುಂ.

**ಸಹದೇವಂ**—ಆರ್ಯ! ದುರಾತ್ಮಂ ದುರ್ಯ್ಯೋಧನನಿವಂ ಭಗವದ್ವಾಸುದೇವನ ಸ್ವರೂಪಮಂ ಅಱಿದನಿಲ್ಲಮೇ?

**ಭೀಮಂ**—ವತ್ಸ! ಗಾಂಪನಲ್ತೆ? ದುರಾತ್ಮನಿವಂ; ಆದೆಂತು ಅಱಿವೊಂ? ನೋಡು—

ರಮಿಸುತ್ತುಂ ನಿಟ್ಟೆಯಿಂದಾತ್ಮನೊಳತಿವಿಶದಧ್ಯಾನದೊಳ್ ನಲ್ಮೆಯಂ ತಾ | ಳ್ದಮಲಜ್ಞಾನರ್ದ್ಧಿಯಿಂದಂ ಮಿಗೆ ಪಱಿಯೆ ತಮೋಗ್ರಂಥಿಗಳ್ ಸತ್ತ್ವನಿಷ್ಠರ್ || ತಿಮಿರಕ್ಕಂ ಜೋತಿಗಂ ದೂರದೆ ತೊಳಗುತುಮಿರ್ಪ್ಪಾವನಂ ನೋೞ್ಪರತ್ಯು | ತ್ತಮನಾಗಿರ್ಪ್ಪಾಚಿರತ್ನಪ್ರಭುವನಱಿವನೆಂತೀಯವಿದ್ಯಾಂಧಭೂತಂ ||೨೫||

(ಕಂಚುಕಿಯಂ ನೋಡಿ) ಆರ್ಯ ಮೈತ್ರೇಯ! ಆರ್ಯನೀಗಳ್ ಏ ಗೆಯ್ಯುತಿರ್ದಪಂ?

**ಕಂಚುಕಿ**—ಮಹಾರಾಜನ ಕಾರ್ಯಸನ್ನಿವೇಶಮಂ ಕುಮಾರನೇ ಬಿಜಯಂಗೈದು ತಿಳಿಯಲ್ವೇಳ್ಕುಂ. (ಎಂದು ಪೋಪಂ)

(ನೇಪಥ್ಯದೊಳ್ ಕಲಕಲಮಾದಿಂಬಳಿಯಂ) ಎಲೆಎಲೆ ದ್ರುಪದವಿರಾಟ ವೃಷ್ಣ್ಯಂಧಕಸಹದೇವಪ್ರಮುಖರೆಮ್ಮಕ್ಷೌಹಿಣೀಪತಿಗಳಿರಾ! ಕೌರವ ಸೇನೆಯೊಳ್ ಪ್ರಧಾನರೆನಿಸಿಪ್ಪ ಯೋಧರಿರಾ! ನೀವೆಲ್ಲರುಂ ಕೇಳಿಂ.

ವರಸತ್ಯವ್ರತಭಂಗಕಂಜಿ ಲಘುಗೈದಂ ಯತ್ನದಿಂದಾವುದಂ |
ಮಱೆಯಲ್ ವಾಂಛಿಸಿದಂ ಶಮಂ ಮಿಗೆ ಕುಲಕ್ಷೇಮೇಚ್ಛೆಯಿಂದಾ
ವುದಂ || ಅರಣಿದ್ಯೂತದೆ ಸಂಭೃತಂ ನಿಜವಧೂಕೇಶಾಂಬರಾಕರ್ಷದಿಂ |
ಪಿರಿದೀಧರ್ಮಜಕೋಪವಹ್ನಿ ಮಸಗಿರ್ಕ್ಕುಂ ಕೌರವಾರಣ್ಯದೊಳ್||೨೬||

**ಭೀಮಂ**—(ಆಲಿಸಿ, ಸಂತಸದಿಂಮೇಣ್ ಮುನಿಸಿನಿಂ ಕೂಡಿ) ಮಸಗುಗೆ ಮಸಗುಗೆ. ಈಗಳ್ ಆರ್ಯನ ಕ್ರೋಧಾಗ್ನಿ ತಡೆಯಿಲ್ಲದೆ ದಳ್ಳಿಸುತಿರ್ಕ್ಕುಂ.

(ಮತ್ತೆ ನೇಪಥ್ಯದೊಳ್ ಕಲಕಲಮಪ್ಪುದು)

**ದ್ರೌಪದಿ**—ಆರ್ಯಪುತ್ರ! ಇದೇಂ? ಕಡೆಗಾಲದ ಮುಗಿಲ ಮೊಬಗಿನಂತೆ ಗಂಭೀರಮಾದೀರಣದುಂದುಭಿ ಅಡಿಗಡಿಗಂ ಪೊಯ್ಯುಗುಂ.

**ಭೀಮಂ**—ದೇವಿ! ಪೆಱತೇಂ? ಜನ್ನಂ ಸಮನಿಕುಂ.

**ದ್ರೌಪದಿ**—ಇದಾವುದು ಜನ್ನಂ?

**ಭೀಮಂ**—ಜುದ್ಧಜನ್ನಂ; ಕೇಳ್.

ನೆರೆದಾಂನಾಲ್ವರುಮೃತ್ವಿಜರ್ಹರಿಯುಮಂ ಕರ್ಮೋಪದೇಶಸ್ಥಿತಂ |
ಧರೆಯಾಣ್ಮಂ ರಣಯಾಗದೀಕ್ಷಿತನೆನಿಪ್ಪಂ ನೀಂ ವ್ರತಂದಾಳ್ದವಳ್ ||
ಕುರುಪುತ್ರರ್ ಪಶುಗಳ್ ಭವತ್ಪರಿಭವಕ್ಲೇಶಪ್ರಣಾಶಂ ಫಲಂ |
ಕರೆಯಲ್ ಕ್ಷತ್ರಿಯರಂ ವಿಜೃಂಭಿಸುಗುಮುದ್ಯತ್ಕೀರ್ತಿಭೇರೀರವಂ||೨೭||

**ಸಹದೇವಂ**—ಆರ್ಯ! ಈಗಳ್ ಗುರುಜನದನುಜ್ಞೆಯಂ ಪಡೆದು ವಿಕ್ರಮಕ್ಕೆ ತಕ್ಕುದನೆಸಗಲಾಂ ಪೋಪಂ.

**ಭೀಮಂ**—ಇದೆ ನಾವಾರ್ಯನ ಅನುಜ್ಞೆಯಂ ಈಡೇಱಿಸಲ್ ಸಿದ್ಧರಾಗಿಯೇ ಇರ್ದಪೆವು. (ಎೞ್ದು) ದೇವಿ! ಆವೀಗಳ್ ಕುರುಕುಲಧ್ವಂಸಕೆ ತೆರಳ್ದಪೆವು.

**ದ್ರೌಪದಿ**—(ಕಣ್ಣೀರಂ ತಡೆಯುತ್ತೆ) ಅಸುರರೊಡನೆ ಪೋಣರಲ್ ತೆರಳ್ದ ಸಿರಿಯುರಸಂಗೆ ಸಮನಿಸಿದ ಮಂಗಲಂ ನಿಮಗೆ ಸಮನಿಸುಗೆ.

**ಚೇಟಿ**—ಅಲ್ಲದೆಯುಂ ಯುದ್ಧರಂಗದತ್ತಣಿಂ ನೀಂ ಮರಲ್ದು ಬಂದೆನ್ನಂ ಸಮಾಶ್ವಸಿಪುದೆಂದು ದೇವಿ ಪಾಂಚಾಲಿ ನುಡಿಗುಂ.

**ಭೀಮಂ**—ದೇವಿ! ಈಗಳುಂ ಬಱದಪ್ಪ ಸಮಾಶ್ವಾಸನದಿನೇಂ?

ಪರಿಭವದೆ ಕಂದಿ ಲಜ್ಜಾ |
ಭರದಿಂದಂ ದುಗುಡಮಾಂತಮುಖಮುಳ್ಳವನಂ ||
ಕುರುಕುಲಮಂ ನಿಶ್ಶೇಷಿ |
ಕರಿಸದನಂ ಭೀಮನಂ ವಿಲೋಕಿಸೆ ಮುಗುೞ್ದಂ ||೨೮||

**ದ್ರೌಪದಿ**—ಆರ್ಯಪುತ್ರ! ಪಾಂಚಾಲಿಗಾದ ಪರಿಭವದಿಂ ಕೋಪಾಗ್ನಿ ಪಜ್ಜಳಿಸುತಿರ್ಪಿನಂ, ಶರೀರದ ಮೇಲೆಯುಂ ದಿಟ್ಟಿಯಿಲ್ಲದೆ ನೀಂ ಸಂಚರಿಪುದಾಗದು. ಏಕೆನೆ, ಶತ್ರುಸೈನ್ಯದೊಳ್ ಅಪ್ರಮತ್ತರಾಗಿ ಸಂಚರಿಸವೇೞ್ಕುಮೆಂದು ಕೇಳ್ದಿರ್ಪೆವು.

**ಭೀಮಂ**—ಏಂ ಭೀಮಸೇನನುಂ ಶತ್ರುಸೈನ್ಯದೊಳ್ ಅಪ್ರಮತ್ತನಾಗಿ ಸಂಚರಿಸವೇೞ್ಕುಮೇ? ಎಲೆ ಸುಕ್ಷತ್ರಿಯೆ! ನೋಡು ನೋಡು—

ಸಮುಸಂದಾಸ್ಫಾಲದಿಂ ಪೋೞ್ದ ಭಡತತಿಯ ವಸಾರಕ್ತಮಾಂಸಂಗಳುತ್ಕ | ರ್ದಮದೊಳ್ ಪೂೞ್ದುೞ್ದ ತೇರಂ ತುೞಿದು ಚರಿಪ ಕಟ್ಟಾಳ್ಗಳಿಂ

ರಕ್ತಪಾನ ॥ ಪ್ರಮಿಳತ್ಕ್ರೋಡಜಟ್ಟಿವಾವಾದ್ಯದೆ ಕುಣಿವ ಕಬಂಧಂಗಳಿಂ ಘೋರವಾದಾ। ಸಮರಾಂಭೋರಾಶಿಪಾಥೋಂತರದೆ ಚರಿಯಿಸಲ್ ಪಂಡಿತರ್ ಪಾಂಡುಪುತ್ರರ್ ॥೨೯॥

(ಎಂದೆಲ್ಲರುಂ ತೆರಳ್ದರ್)

**ಇಂತಿದು ಪ್ರಥಮಾಂಕಂ.**



## ದ್ವಿತೀಯಾಂಕಂ.

(ಬಟ್ಟೆಕೆ ಕಂಚುಕಿ ಪೊಕ್ಕಪಂ)

**ಕಂಚುಕಿ**—ಮಹಾರಾಜದುರ್ಯೋಧನನೆನಗೆ—ವಿನಯಂಧರ ! ಅರಸಿಯುಂ ಭಾನುಮತಿಯುಂ ತುರಿಪದಿನಱಿಸು. ಮಾತೆಯ ಅಡಿಗಳ್ಗೆ ಅಭಿವಂದಿಪನಡೆವಳಿಯುಂ ನೆಗೞ್ಚ ಆತ್ತಣಿಂ ಮರಲ್ದಳೋ ಮರಲ್ದಿಳಿಲ್ಲವೋ—ಎಂಬುದನಱಿ. ಏಕೆನೆ, ಈಗಳಾನಾಕೆಯುಂ ಕಂಡು, ಬೞಿಕ್ಕೊಡನೆಯೆ ರಣರಂಗಮನೆಯ್ದಿ, ಅಭಿಮನ್ಯುವಂ ಸದೆದ ಕರ್ಣಜಯದ್ರಥಾದಿಗಳನರಸರಂ ಸಂಮಾನಿಸವೇೞ್ಕುಮಲ್ತೆ—ಎಂದು ಆಣತಿಯಿತ್ತಿರ್ಪಂ. ಅದಱಿನಾನೀಗಳ್ ಅತಿಶೀಘ್ರದೊಳೆ ತೆರಳಲ್ವೇೞ್ಕುಂ. ಮಹಾರಾಜನ ಪ್ರಭಾವಮನೇನೆಂದಪೆಂ ! ಮುತ್ತಂಗೆನಗೆ ಅಂತಪುರದೆಸಕಂ ಮರ್ಯಾದಾಮಾತ್ರಮೆವಲಂ. ಒಂದುಪಕ್ಷದೊಳ್ ಮುಪ್ಪನೇಕೆ ಜಱಿದಪೆಂ? ಏಕೆನೆ, ಅಂತವುರದ ಎಲ್ಲಧಿಕಾರಿಗಳ ಉಡುಗೆತುಡುಗೆಯುಂ ನಡೆನುಡಿಯುಮಿದುವೆ. ಅಂತಲ್ತೆ—

ಇರೆಯುಂ ದಿಟ್ಟಿಗಳೆಯ್ದೆ ಮಾಲಿಸಲಸಾಧ್ಯಂ ಕೇಳ್ದೊಡಂ ಕೇಳ್ದುದಿ।
ಲ್ಲಿರೆಯುಂ ಶಕ್ತಿ ನಿಜಾಧಿಕಾರಪದಮೆಂದಾಂ ದಂಡಮಂ ತಾಳ್ದಪೆಂ ॥
ಚರಿಪೆಂ ನಮ್ರತೆಯಿಂದಮೇ ಸ್ಖಲನಮೆಲ್ಲಾದಪ್ಪುದೋ ಎಂದು ಮೇಣ್।
ಪರಸೇವಾವಶಜೀವಿತಂಗೆನಗದೇಂಗೈದತ್ತು ಮುಪ್ಪಾರಯಲ್ ॥೩೦॥

(ಇನಿಸು ನಡೆದು, ಮೇಲೆ ನೋಡಿ) ವಿಹಂಗಿಕೆ! ವಿಹಂಗಿಕೆ! ದೇವಿ ಭಾನುಮತಿ ಅತ್ತೆವಿರ ಪಾದವಂದನಮನಾಚರಿಸಿ ಮರಲ್ದು ಬಂದಳೇಂ? (ಆಲಿಸಿ) ಏವೇೞ್ದಪೆ? ಆರ್ಯ! ಈಭಾನುಮತೀದೇವಿ ಪತಿಯ ಸಮರ ವಿಜಯಮಂ ಬಯಸಿ, ದೇವರ್ಕಳ ಮೇಣ್ ಪಿರಿಯರ ಪಾದವಂದನಮಂ ನೆಗೞ್ದು ಇಂದಿನಿಂ ನೇಮಂಗೊಂಡು ಅರಮನೆಯ ಬಾಲೋದ್ಯಾನದೊಳೆ ಇರ್ಕುವೆಂದೋ? ಅದೊಡೆ ಭದ್ರೆ! ತೆರಳ್ ನಿನ್ನೆಸಕಮನೆಸಗಲ್. ಆನುಂ ದೇವಿಯಿತ್ತಲಿರ್ಪುದಂ ಮಹಾರಾಯಂಗೆ ಅಱಿಪುವೆಂ. (ಕಿಱಿದು ದೂರಂ ಪೋಗಿ) ಸಾಧು ಎಲೆ ಹದಿಬದೆ! ಸಾಧು. ಪೆಣ್ಣಡೆಯೊಳಿರ್ದೊಡಂ ನೀನೆ ಮೇಲ್; ಮಹಾರಾಯನಲ್ತು. ಶ್ರೀಕೃಷ್ಣನ ನೆರಮಂ ನೆಮ್ಮಿದ ಬಲ್ಲಿದರೆನಿಸಿದ ಪಗೆಗಳ್ ಪಾಂಡವರ್ ಯುದ್ಧಕ್ಕೆ ಸನ್ನದ್ಧರಾಗಿರ್ಪಿನಂ, ಈತನೀಗಳುಂ ಅಂತಃಪುರದೊಳ್ ವಿಹಾರಸುಖಮನನುಭವಿಸುತಿರ್ದಪಂ. (ಆಲೋಚಿಸಿ) ಮಹಾರಾಜನ ನಡೆವಳಿಯಿದೊಂದು ತಗದು. ಅದೇನೆನೆ—

ಕೈದಂ ತಾಳ್ದಂದಿನಿಂದಂ ಪರಶುವೆಱೆದ ರಾಮಂಗವಂಗಂ ವಿಭಂಗಂ | ಗೈದಂ ಗಂಗಾತನೂಜಂ ರಿಪುಶರಹತಿಯಿಂ ಬಿೞ್ದೊಡಂ ಖೇದಮಿಲ್ಲಂ || ಮೋದಂ ಭೂಪಂಗನೇಕೋದ್ಧತರಿಪುವಿಜಯಶ್ರಾಂತನೇಕಾಕಿ ಮೇಣ್ ನಿ | ಷ್ಕೋದಂಡಂ ಬಾಲಕಂ ತಾನಿವನೆನಿಸಿದ ಸೌಭದ್ರನಾ ಘಾತದಿಂದಂ ||೩೧||

ಎಂತುಂ ದೈವವೆಮಗೊಳ್ಪಿತನೆಸಗದು. ದೇವಿಯಿತ್ತಲಿರ್ಪುದ ನೊಡೆಯಂಗೆ ಬಿನ್ನವಿಪೆಂ. (ಎಂದು ಪೋಪಂ)

## || ಇದು ಶುದ್ಧವಿಷ್ಕಂಭಂ ||

(ಬೞಿಕ್ಕಾಸನಸ್ಥೆ ಭಾನುಮತಿಯುಂ ಸಖಿಯುಂ ಚೇಟಿಯುಂ ಪೊಕ್ಕಪರ್)

**ಸಖಿ**—ಸಖಿ! ಭಾನುಮತಿ! ನೀಂ ಮಾನಶಾಲಿಯಾದ ಮಹಾ ರಾಜದುರ್ಯೋಧನನ ಪಟ್ಟದರಸಿಯಾದೊಡಂ ಇಂದು ಕನಸುಗಂಡು ದಕ್ಕೆಯೆ ಅದೇಕಿಂತು ಎರ್ದೆಗುಂದಿ ಬಂಬಲ್ಪಟಲ್ದಪೆ?

**ಚೇಟಿ**—ಒಡತಿ! ಸುವಚನೆ ಸಮುಚಿತವಚನಮಂ ವಚಿಸುವಳ್. ಜನಂ ಕನಸುಗಂಡಂದು ಅದೇನಂ ಕನವರಿಸದು ?

**ಭಾನುಮತಿ**—ಇದುಂಟು. ಆದೊಡೆನ್ನ ಕನಸದು ಅಶುಭಕರಮೆನೆ ತೋಱುಗುಂ.

**ಸಖಿ**—ಪ್ರಿಯಸಖಿ! ಇಂತಿರ್ಪೊಡೆ ಕನಸಂ ಪೇೞ; ಏಕೆಂದೊಡೆ ಆವಿರ್ವರುಂ ಅದಂ ಬಗೆದು, ಧರ್ಮಕಥಾಪ್ರಸಂಗದಿಂದಮೋ ದೇವತಾಸಂಕೀರ್ತನದಿಂದಮೋ ಪಾರ್ವರ್ಗೆ ದಾನಮನೀವುದಱಿಂದಮೋ ಪರಿಹರಿಪೆವು.

**ಚೇಟಿ**—ಒಡತಿ! ಸುವಚನೆಯ ವಚನಂ ಸಮುಚಿತಮೆನಿಕುಂ. "ಕನಸುಗಳ್ ಅಶುಭಂಗಳಾದೊಡಂ ದೇವತಾಸಂಕೀರ್ತನದಿಂ ಶುಭಂಗಳಾಗಿ ಪರಿಣಮಿಕುಂ" ಎಂದು ಕೇಳ್ಗಂ.

**ಭಾನುಮತಿ**—ಅಪ್ಪೊಡೆ ಪೇೞ್ದಪೆಂ; ಅವಹಿತೆಯರಾಗಿಂ.

**ಸಖಿ**—ಪ್ರಿಯಸಖಿ! ಪೇೞ.

**ಭಾನುಮತಿ**—ಕೆಳದಿ! ಇಂದು ನಾಂ ಪ್ರಮದವನದೊಳಿರ್ಪಾಗಳ್ ಎನ್ನಿದಿರೊಳ್ ಕಡುಚೆಲ್ವಿನ ನಕುಲನಿಂ ಸರ್ಪಶತಂ ಖಂಡಿತಮಾದತ್ತು.

**ಇರ್ವರುಂ**—(ಮಱಿಯೊಳ್) ಶಾಂತಮಕ್ಕೆ ಪಾಪಂ ಶಾಂತಮಕ್ಕೆ; ಅಮಂಗಲಂ ಪರಿಹೃತಮಕ್ಕೆ; ಅಮಂಗಲಂ ಪರಿಹೃತಮಕ್ಕೆ. (ಪ್ರಕಾಶಂ) ಬೞಿಯಂ ಬೞಿಯಂ ?

**ಭಾನುಮತಿ**—ಕೆಳದಿಯರಿರಾ! ಭಯದಿಂ ಮಱೆತಂತಿರ್ಕ್ಕುಂ, ನಿಲ್ಲಿಂ; ನೆನೆಪುಗೊಂಡು ಪೇೞ್ದಪೆನೆಲ್ಲಮಂ. (ಎಂದು ಚಿಂತೆಯನಭಿನಯಿಸುವಳ್).

(ಬೞಿಕೆ ದುರ್ಯೋಧನನುಂ ಕಂಚುಕಿಯುಂ ಪೊಕ್ಕಪರ್)

**ದುರ್ಯೋಧನಂ**—ಇದಾತೆರ್ೞ್‌ ನಲ್ನುಡಿ—

ಮಱೆಯೊಳ್ ಮೇಣ್ ಮುಂಗಡೆಯೊಳ್ |
ಪಿರಿದೋ ಮೇಣ್ಕಿಱಿದೊ ಬಿಡದೆ ತಾನೋ ಮೇಣ ||
ನ್ಯರೊ ತನ್ನಪಕಾರಿಗಳೊಳ್ |
ವಿರಚಿಸಿದಪಕಾರಮೊಡರಿಕುಂ ಕಡುನಲವಂ ||೩೨||

ಏಕೆನೆ, ಈಗಳ್ ದ್ರೋಣಕರ್ಣಜಯದ್ರಥಾದಿಗಳಿಂದಭಿಮನ್ಯು ಹತನಾದನೆಂಬುದನಾಲಿಸಲೊಡಮೆನ್ನ ಹೃದಯಮುಸಿರ್ವಂತಾಯ್ತು.

**ಕಂಚುಕಿ**—ಮಹಾಪ್ರಭುವೆ! ಆಚಾರ್ಯರ ಅಸ್ತ್ರಪ್ರಭಾವಕ್ಕೆ ಇದು ಅತಿದುಷ್ಕರವಾದುದಲ್ತು. ಈವಿಷಯದೊಳ್ ಕರ್ಣಜಯದ್ರಥರ್ಗಂ ಪೊಗೞ್ಕೆಯೇಂ ?

**ದುರ್ಯೋಧನಂ**—ವಿನಯಂಧರ! ಏನೆಂದಪೆ ನೀಂ? ಏಕಾಕಿ, ಪಸುಳೆ, ಬಿಲ್ಲಿಲಿ; ಇಂತಪ್ಪನಂ ಪಲಂಬರ್ ಸೇರ್ದು ಕೊಂದರೆಂದೋ? ನೋಡು—

ಮುಂದೆಡೆಯುಳ್ಳಿ ಶಿಖಂಡಿಯು |
ನಂದವನಂ ನಿಲಿಸಿ ಕೆಬವನಂ ಭೀಷ್ಮನುಮಂ ||
ಕೊಂದುದಱಿಂದಂ ಪಾಂಡುವ |
ನಂದನರ್ಗಾವುದು ಪೊಗೞ್ಕೆಯುದುವೆ ದಲೆಮಗಂ ||೩೩||

**ಕಂಚುಕಿ**—(ಚಿಕ್ಕಸಂಗೊಂಡು) ಒಡೆಯ! ಇದನಿಂತುಟು ಕಲ್ಪಿಸಲಾಗದು. ಪೆಱತೇನೆಂದೊಡೆ, ಬೀರಕ್ಕೆ ಕುಂದಕ್ಕುಮೆಂಬುದನಾಂ ಮುನ್ನಾಳೋಚಿಸಿದೆವಿಲ್ಲಮೆಂಬುದಱಿನಿಂತು ಬಿನ್ನವಿಸಿದಪೆಂ.

**ದುರ್ಯೋಧನಂ**—ಇದಿಂತು.

ಅನುಚರರಿಂ ಬಾಂಧವರಿಂ |
ತನುಜರಿನನುಜರಿನೊಱಲ್ದರಿಂ ಕೂಡಿದನಂ ||

ಅನುವರದೊಳ್ ಸದೆವಂ ಭೋಂ |
ಕನೆ ಬಲದಿಂ ಪಾಂಡುಸೂನು ದುರ್ಯೋಧನನಂ ||೩೪||

**ಕಂಚುಕಿ**—(ಬೆಗಡನಾಂತು ಕೊಡಂಕೆಗಳಂ ಮುಚ್ಚಿಕೊಂಡು) ಶಾಂತಂ ಪಾಪಂ ಶಾಂತಂ ಪಾಪಂ.

**ದುರ್ಯೋಧನಂ**—ವಿನಯಂಧರ! ಆನೇವೇಳ್ದಂ?

**ಕಂಚುಕಿ**—"ಅನುಚರರಿಂ ಬಾಂಧವರಿಂ" ಎಂಬ ಪದ್ಯ ಮೊಡೆಯನಿಂ ವ್ಯತ್ಯಸ್ತವಾಗಿ ಪೇಳ್ದುದಾಯ್ತು.

**ದುರ್ಯೋಧನಂ**—ಇಂದು ಭಾನುಮತಿ ಮುನ್ನಂತೆವೊಲೆನಗೆ ಪೇಳದೆ ಮುನ್ನೇಸಱೊಳೆ ಶುದ್ಧಾಂತದತ್ತಣಿಂ ತೆರಳ್ದಳೆಂದು ಎನತು ಮನವಾಕುಲವಾಗಿಪ್ಪುದು. ಅದಱಿಂದಾಕೆಯಿರ್ಪತಾಣಮನಱಿಪು.

**ಕಂಚುಕಿ**—ಸ್ವಾಮಿಯಿತ್ತಲಿತ್ತಲ್ ಬಿಜಯಂಗೆಯ್ವುದು. (ಮುಂತೀಕ್ಷಿಸಿ ಸುತ್ತಲುಂ ಸೌಸವಮನಾಘ್ರಾಣಿಸಿ) ಸ್ವಾಮಿಯೆ! ಮಾಲಿಸು ಮಾಲಿಸು; ಐಕಿಲ್ದುಂದಲ್ಗಳಿಂ ಕುಳಿರ್ದ ಎರಲ್ ತೀಡಿದುದಱಿನಳ್ಳಾಡಿ ತೊಟ್ಟುವಿಟ್ಟುದಿರ್ದ ಲಕ್ಕಿವೂಗಳ ವಿಸರವನೊಳಕೊಂಡುದುಂ ನಸುಗೆಂಪೇಱಿದ ಮುಗ್ಧಾಂಗನೆಯ ಕದಂಪಿನಂತೆ ಬೆಳಗೆಂಪುವೆತ್ತ ಪ್ರಿಯಂಗು ಕುಸುಮಂಗಳಿಂ ವಿಜಿತವಾದ ಶ್ಯಾಮಲತೆಯ ಸೊಬಗುಳ್ಳುದುಂ, ವೆಗ್ಗಳ ಮೆನಿಪ ಮಲರ್ದ ಮೊಲ್ಲೆಮಲರ್ಗಳಿಂ ಮುಗಮುಗಿಸಿ ತಣ್ಪಿಡಿದು ಸೊಗಯಿಪುದುಮಾದ ನಿನ್ನ ಬಾಲೋದ್ಯಾನಮಿದು ಮುಂನೇಸಱೊಳದೇಂ ಕಣ್ಗೆ ಡ್ಡವಾಗಿಪ್ಪುದೋ!! ಅದಱಿಂ ಮಹಾಪ್ರಭು ಕಟಾಕ್ಷಿಸವೇಳ್ಕುಂ. ಅಂತಲ್ತೆ:—

ಇರುಳಿನೊಳರಲ್ದ ಹಿಮಯುತ |
ಮರಂದಮಡಸಿದ ಸುಮಂಗಳೊಡನುರುಳ್ದಳಿಗಳ್ ||
ತರಣಿಕರಫುಲ್ಲಮುಕುಳೋ |
ದರಗಂಧದಿನಱಿತು ಪದ್ಮಕುಲಮಂ ಸೇರ್ಗುಂ ||೩೫||

**ದುರ್ಯೋಧನಂ**—ವಿನಯಂಧರ! ಈಮುಂಬಗಲೊಳ್ ಪೆಱತೊಂದು ಕಡುರಮ್ಯವಾಗಿ ಕಣ್ಗೊಪ್ಪುಗುಂ; ನೋಡು—

ಅರಲುತೆ ಬಿತ್ತರಂಬಡೆದ ರಮ್ಯದಳಂಗಳುಪಾಂತಜಾಲದೊಳ್ |
ಪರೆಪಿದ ಪದ್ಮಮಿತ್ರನ ಕರಂಗಳ ಸೋಂಕಿನಿನೆಟ್ಟುಱಂತು ಸ ||
ತ್ಪರಿಮಳಭಾರದಣ್ಪಿನಿಸು ಕಣ್ಗೊಳೆ ಪೆಣ್ಗಳನೊಂದಿ ರಾಜರಂ |
ತರಲುಣಿಗಳ್ ವಿಸರ್ಜಿಪುವು ಪದ್ಮಿನಿಯಾ ತತಗರ್ಭಶಯ್ಯೆಯಂ ||೩೬||

**ಕಂಚುಕಿ**—ಇದೆ ಭಾನುಮತಿ ಸುವಚನಾತರಳಿಕೆಯರಿಂ ಸೇವ್ಯಮಾನೆಯಾಗಿ ಇತ್ತಲಿರ್ದಪಳ್. ಸ್ವಾಮಿ ಸನಿಹಕೆ ಬಿಜಯಂಗೆಯ್ವೇಟ್ಕುಂ.

**ದುರ್ಯೋಧನಂ**—ವಿನಯಂಧರ! ನೀಂ ತೆರಳ್; ಸಮರರಥಮಂತಾರ. ಆನುಂ ದೇವಿಯುಂ ಕಂಡು ಬೆನ್ನನೆ ಬಂದಪೆಂ.

**ಕಂಚುಕಿ**—ಇದೆ ಸ್ವಾಮಿಯ ಬೆಸನನೆಸಗಿದೆಂ (ಎಂದು ಪೋಪಂ.)

**ಸಖಿ**—ಪ್ರಿಯಸಖಿ! ನೆನೆಪಿಂಗೆ ಬಂದುದೇ?

**ಭಾನುಮತಿ**—ನೆನೆಪಿಂಗೆ ಬಂದುದು. ಸಖಿ! ಪ್ರಮದವನದೊಳಾನಿರ್ಪಂದು ಎನ್ನಿದಿರೊಳ್ ಕಡುಚೆಲ್ವಿನ ರೂವಿನ ನಕುಲನಿಂ ಸರ್ಪಶತಂ ಖಂಡಿತಮಾದುದು.

**ಇರ್ವರುಂ**—ಶಾಂತಂಪಾಪಂ ಶಾಂತಂಪಾಪಂ.

**ಭಾನುಮತಿ**—ಬೇಗುದಿಯಿಂ ಮನಮಾಕುಲಮೆನಿಸಿರೆ ಮಗುಳ್ದುಂ ವಿಸ್ಮೃತಿಯೊದವಿದತ್ತು.

**ದುರ್ಯೋಧನಂ**—ಆಹಹ! ದೇವಿ ಭಾನುಮತಿ ಸುವಚನಾತರಳಿಕೆಯರೊಡನೆ ಏನನೋ ಆಳೋಚಂಗೆಯ್ಯುತಿರ್ದಪಳ್. ಅಕ್ಕೆ; ಈಬಳ್ಳಿವಾಡದೊಳಗೆ ಮಱೆಗೊಂಡು ನಿಂದು ಈಕೆಗಳ ಸ್ವಚ್ಛಂದಾಲಾಪಮಂ ಕೇಳ್ವೆಂ. (ಎಂದು ಅಂತು ಮಱೆಯೊಳ್ ನಿಂತಪಂ)

**ಸಖಿ**—ಸಂತಪಿಪುದಱನೇಂ? ಪ್ರಿಯಸಖಿ! ಪೇೞ.

**ದುರ್ಯೋಧನಂ**—ಅಱಯೆಂಗಡಾ? ಇವಳ ಸಂತಾಪಕ್ಕೆ ಕಾರಣ ಮೇನಿರ್ಕುಂ? ಒಂದುಪಕ್ಷದೊಳ್ ಇಂದೆನಗೆ ಅಱಪದೆ ಅಂತವುರದ ತ್ತಣಿಂ ತೆರಳ್ದ ಳೆಂಬುದಱಂದಮೆ ಇವಳ ಮುನಿಸು ನಿಶ್ಚಿತಮಾಗಿರ್ಕುಂ. ಎಲೆ ಭಾನುಮತಿ! ನಿನ್ನ ಮುನಿಸಿಂಗೆ ದುರ್ಯೋಧನಂ ವಿಷಯನಲ್ತು ಗಡಾ? ನೋಡು—ಪ್ರಿಯೆ!

ಅಱಯದೆ ಕಂಠದಿಂದೆ ನಳಿತೋಳ ಸಡಿಲ್ಚಿದೆನೇಂ ಸುಷುಪ್ತಿ ಕುಂ |
ದಿರೆ ಪೊರಳ್ವಂದು ಮನ್ನಿಸೆನೆ ನಿನ್ನಿದಿರೊಳ್ ಮೊಗಮಿಕ್ಕಿ ಪೋದಿರುಳ್ ||
ಪರಸತಿಗೊಲ್ದ ಕೇೞ್ದನಿಸಿ ಸೊಪ್ಪದೆ ನಿನ್ನಯ ಕಣ್ ಬಿೞ್ದನೇಂ |
ಪರಿಜನದಂತೆ ಭರ್ತ್ಸ್ಯನೆನಿಪೆನ್ನೊಳಗೀಕ್ಷಿಪೆಯಾವದೋಷಮಂ ||೩೭||

(ಚಿಂತಿಸಿ) ಅಂತಲ್ಲದೊಡೆ—

ಮನದೊಳಗೆನ್ನನೆ ನಚ್ಚಿದ |
ವನಿತೆಯಿವಳ್ ಪ್ರಣಯಮತ್ಸರಂಬಡೆದೀಗಳ್ ||
ಅನುರಕ್ತತೆ ಘನವೆನಿಸಿರ |
ಲಿನಿಸೆನ್ನೊಳ್ ತಪ್ಪನೆಣಿಸಿ ಮುನಿದವಳಕ್ಕುಂ ||೩೮||

ಆದೊಡಮುದೇನಂ ನುಡಿದಪಳೋ ಕೇಳ್ವೆಂ.

**ಭಾನುಮತಿ**—ಬೞಯುಂ ಕಡುಚೆಲ್ವಿನ ರೂಪಿನ ಅನಕುಲನಂ ನೋಡಲೆನಗೆ ಕುತೂಹಲಮಾದತ್ತು.

**ದುರ್ಯೋಧನಂ**—ಏಂ? "ಕಡುಚೆಲ್ವಿನ ರೂಪಿನ ಅನಕುಲನಂ ನೋಡಲೆನಗೆ ಕುತೂಹಲಮಾದತ್ತು" ಆದೊಡೆ ಅದೆಂತು ಮಾದ್ರೀಸುತ ನೊಳನುರಕ್ತೆಯಾದೀಪಾಪಿನಿಯೆಮ್ಮನೆ ಅೞಗೊಂಡಳ್? (ಊಹಿಸಿ, "ಮನದೊಳಗೆಮ್ಮನೆ ನಚ್ಚಿದ" ಎಂಬ ಪದ್ಯಮಂ ಪಠಿಸಿ) ಎಗ್ಗ ದುರ್ಯೋಧನ! ಸ್ವೈರಿಣೀವಂಚಿತನಂ ತನ್ನಂ ಬಹುಮಾನಿಸಿದನೀಗಳೇನೆಂದಪೆ? ಅದರ್ಕೇ

ಇವಳ್ಗೆ ಬೆಳಗಪ್ಪುದುಂ ವಿಜನಮಪ್ಪ ತಾಣದಭಿಲಾಷೆ. ಅಲ್ಲದೆಯುಂ ಕೆಳದಿಯರಾಡುವ ನುಡಿಗಳಲ್ಲೊಲವರಂ. ದುರ್ಯೋಧನನಾದೊಡೆ ಮೋಹದತ್ತಣಿಂ ಸಿತಗೆಯ ಹೃದಯಸಾರಮನಱಿಯದೆ ಎಲ್ಲಿಯೋ ಭ್ರಾಂತುಗೊಂಡಂ. ಆಃ ಎಲೆ ಪಾಪೆ! ಎನ್ನ ಮಡದಿಯಾಗಿಯುಂ ದುಶ್ಚರಿತೆಯೆನಿಸಿದವಳೆ!

ಕಡಿದಾಭೀರುತೆಯೆನ್ನ ಮುಂದೆ ನಿನತೀಸಾಸಂಗಳಿಂತಪ್ಪವೆ |
ನ್ನೊಡಲೊಳ್ ಶ್ಲಾಘನೆಯಂತುಟೇಯೊಲವು ಸಚ್ಚಾರಿತ್ರಮಂ ಬಿಟ್ಟರಲ್ || ಜಡನೆನ್ನಲ್ಲದುದಾರವೃತ್ತಿ ಪೆಱತೀಚಾಪಲ್ಯಮಾರ್ಗಂ ಜಸಂ | ಬಡೆದಾನಿರ್ಮಳವಂಶದೊಳ್ ಜನನವೀಲೋಕಾಪವಾದಂ ವಲಂ ||೩೯||

**ಸಖಿ**—ಬೞಿಕೆ ಬೞಿಕೆ?

**ಭಾನುಮತಿ**—ಬೞಿಕೆ ಆಸನಮನದನುೞಿದು ಈ ಬಳ್ಳಿವಾಡಕ್ಕೆ ನಡೆತಂದೆಂ. ಬೞಿಕಂ ಬೆನ್ನನೆ ಬಂದಾನಕುಲಂ ಈಲತಾಮಂಟಪವನೆ ಪುಗುಗುಂ.

**ದುರ್ಯೋಧನಂ**—ಅಹಹ! ಈಪಾತಕಿನಿಯ ಕಿಡುನಡೆವಳಿ ಪಾಣ್ಬೆಯರ್ಗೆ ತಕ್ಕುದು. ಎಲೆ ಕೆಟ್ಟಿರ್ದೆಯಳೆ!

ಬಳೆದೊಲವಿಂ ರಾಗಂ ಮಿಗೆ |
ತಿಳಿಪಿದೆಯಾರಲ್ಲಿ ರಹದೊಳೆನ್ನಯ ಸುಸಿಲಂ ||
ಕೆಳದಿಯರಿವರೊಳೆ ನೆರೆದಿಂ |
ಪೞಿಗಜ್ಜಮನಱಿಪುತಿರ್ಪ್ಪ ನಿನಗಿಲ್ಲಮೆ ನಾಣ್ ||೪೦||

**ಸಖೀ ಚೇಟಿಯರ್**—ಬೞಿಕ್ಕೆ ಬೞಿಕ್ಕೆ?

**ಭಾನುಮತಿ**—ಬೞಿಕ್ಕೆ ಆನಕುಲಂ ಬಿಂಕದಿಂ ಕರತಳಮಂ ನೀಡಿ ಎನ್ನ ಮೇಲುದನೀೞ್ಗಂ.

**ದುರ್ಯೋಧನಂ**—ಏಂ ? "ಬಿಂಕದಿಂ ಕರತಳಮಂ ನೀಡಿ ಮೇಲುದನೀಟ್ಗುಂ" ಇಂ ಕೇಳ್ವುದು ಸಾಲ್ಗುಂ. ಅಕ್ಕೆ ; ಪರವನಿತೆಯು ನಾಕ್ರಮಿಪುದಱೊಳ್ ಬಿತ್ತಿಗನಾದ ಈವಾದ್ರೀಪುತ್ರನ ಹರಣಮಂ ಕೊಳ್ವೆಂ. (ಕಿಱಿದಂತರಂ ಸಾರ್ದು, ಬಗೆದು) ಒಂದುಪಕ್ಷದೊಳ್ ಈಪಾಪೆ ಯುನೆ ಮೊತ್ತಮೊದಲ್ ದಂಡಿಸವೇಟ್ಕುಂ. (ಎಂದು ಪಿಂತಣ್ಗೆ ಸರಿವಂ)

**ಸಖೀ ಚೇಟಿಯರ್**—ಒಟಿಕಂ ಒಟಿಕಂ ?

**ಭಾನುಮತಿ**—ಸಖಿಯರಿರ ! ಒಟಿಕಂ ಆರ್ಯಪುತ್ರಂಗೆಂದು ಬಳೆದ ಬೆಳಗಿನ ಬದ್ದವಣದ ದನಿಯೊಡನೆ ಸೇರ್ದ ವಾರವಿಲಾಸಿನಿಯರ ಗಾಯಣಸಬುದದಿಂದೆಚ್ಚತ್ತೆಂ.

**ದುರ್ಯೋಧನಂ**—(ಸಂದೆಗಂಗೊಂಡು) ಏನಿದು ? ಎಚ್ಚತ್ತೆನೆಂದು ಕನಸುಗಂಡುದನಿವಳ್ ಬಣ್ಣಿಸಿದಳೋ ? ಅಕ್ಕೆ; ಸಖಿಯರ ಮಱು ನುಡಿಯಿಂ ಸ್ಪಷ್ಟಮಕ್ಕುಂ.

**ಸಖೀ ಚೇಟಿಯರ್**—(ದುಗುಡಂಗೊಂಡು, ಪರಸ್ಪರಂ ವಿಲೋಕಿಪರ್)

**ಸಖಿ**— ಇದೇನಾದೊಡಮತ್ಯಾಹಿತಮೆನಿಪೊಡೆ ಗಂಗಾದಿಮಹಾ ನದೀಜಲದಿಂ ಪರಿಹೃತಮಕ್ಕೆ. ಪೂಜ್ಯರವನೀಸುರರ್ ಬೇಳ್ದು ಪಜ್ಜಳಿಸಿದ ಯಜ್ಞೇಶ್ವರನಿಂ ದಗ್ಧಮಾಗುಗೆ.

**ದುರ್ಯೋಧನಂ**—ಸಾಲ್ಗುಂ, ಸಂದೆಗಂಬಡಲಾಗದು ; ಇದಿವಳ್ ನಿರವಿಸಿದುದು ಕನಸುಗಂಡ ವಿಚಾರಮೆ ದಲ್ ; ಅನಾದೊಡೆ ಮೂಢ ಬುದ್ಧಿಯಿಂದಮೆ ಬೇಱಗೆತ್ತೆಂ. ಅಹಹ !

ವಿಧಿಯಿಂ ಸಂವಾದದರ್ಥಶ್ರವಣದೆ ಮುಳಿಸಂ ತಾಳ್ದು ನಾಂ ಸಾರ್ದೆನಿಲ್ಲಂ | ವಿಧಿಯಿಂದರ್ಧೋಕ್ತಿಯೊಳ್ ಕ್ರೋಧದೆ ಪರುಷಮನಾ ನೇನುಮಂ ಪೇೞ್ದೆನಿಲ್ಲಂ || ವಿಧಿಯಿಂ ಸಂಪೂರ್ತಿಯಂ ತಾಂ ಪಡೆದುದು ಕಥನಂ ನಂಬಿಸಲ್ಗಾಂಪನೆನ್ನಂ | ವಿಧಿಯಿಂದೀಗಳ್ ಮೃಷಾದೂಷಣೆ ವಡೆದಿವಳಿಂ ಶೂನ್ಯಮಾಯ್ತಿಲ್ಲ ಲೋಕಂ ||೪೧||

**ಭಾನುಮತಿ**—ಸಖಿ! ಪೇಳ್; ಇದೇಂ ಶುಭಸೂಚಕಮೊ? ಮೇಣಶುಭಸೂಚಕಮೊ?

**ಸಖೀ ಚೇಟಿಯರ್**—(ಪರಸ್ಪರಂ ನೋಟ್ಪರ್).

**ಸುವಚನೆ**—(ಮಚಿಕೆಯೊಳ್) ಇದಱೊಳೊಂದಿನಿತುಂ ಶುಭಸೂಚಕ ಮಲ್ತು. ಪುಸಿಯನುಸಿರ್ವೆನಾದೊಡೆ ಪ್ರಿಯಸಖಿಗೆ ಅಪರಾಧಮನೆಸಗಿದ ಳಾದಪೆಂ; ಬೆಸಗೊಳೆ, ಬಿಟ್ಟತೆನೆಯುಂ ಹಿತಮನೆ ಪೇಳ್ವುದಾರವಂದಿ ರಲ್ತೆ ನೇಹಿಗರ್. (ಪ್ರಕಾಶಂ) ಸಖಿ! ಇದೆಲ್ಲಮನಿಷ್ಟಸೂಚಕಂ; ಆದುದಱಿಂ ದೇವರ್ಗ್ಗೆ ವಂದನಂಗೆಯ್ವುದಱಿಂ ಮೇಣ್ ಪಾರ್ವರ್ಗ್ಗೆ ದಾನ ವೀವುದಱಿಂ ಇದು ಪರಿಹೃತಮಾಗುಗೆ. ಕನಸಿನೊಳ್ ನರಿ ಮುಂಗುರಿ ಕೋಡಗಂ ಪುಲಿಯೆಂಬಿವಂ ಕಾಣ್ಬುದುಂ ಸರ್ಪಶತಮಂ ಕೊಲ್ವುದುಂ ಪ್ರಶಸ್ತಮೆನ್ನರಭಿಜ್ಞರ್.

**ದುರ್ಯೋಧನಂ**—ತಥ್ಯಮಂ ವಚಿಸುವಳ್ ಸುವಚನೆ. ನಕುಲಂ ಸರ್ಪಶತಮಂ ಕೊಂದುದು, ಮತ್ತಮೆರ್ದೆಸೆಱಂಗಂ ಸೆಳೆದುದೆಂಬಿವೆರಡುಂ ನಿಕ್ಕುವಂ ಮುಂದಪ್ಪುದಂ ಪೊಲ್ಲದಂ ಸೂಚಿಪುವೆಂದೆನಗೆ ತೋಱುಗುಂ.

ಆದಪ್ಪುವು ಗಡ ಕನಸುಗ |
ಳಾದಂ ತರದಿಂ ಶುಭಂಗಳಂತಶುಭಂಗಳ್ ||
ಆದೊಡೆಯೀಶತಸಂಖ್ಯೆ ಸ |
ಹೋದರಯುತನೆನ್ನ ಸೋಂಕುವಂತೆವೊಲಿಕ್ಕುಂ ||೪೨||

(ಎಡಗಣ್ಣದಿರ್ಪುದನಭಿನಯಿಸಿ) ಆಃ! ದುರ್ಯೋಧನಂಗೆನಗಂ ಅಶುಭ ನಿಮಿತ್ತಂಗಳ್ ಮನದ ತಳ್ಳಂಕಮಂ ಸೂಚಿಕುಮೇ? (ದರ್ಪದಿಂ) ಒಂದುಪಕ್ಷದೊಳ್ ಪಂದೆಗಳ್ಗಪ್ಪ ಇಂತಹ ಹೃದಯಕಂಪನಂಗಳೊಳ್ ದುರ್ಯೋಧನಂಗದೇನೆಣಿಕೆ? ಈಯರ್ಥಮನಂಗಿರನುಂ ಪೇಟ್ದಿರ್ಪಂ—

ರವಿಮುಖ್ಯಗ್ರಹಗತಿಯುಂ |
ಸವನಿಪ ಕನಸುಂ ನಿಮಿತ್ತಮುಪವಾಚಿಕಮೆಂ ||

ಬಿವು ಜಗದೆ ಕಾಕತಾಳೀ |
ಯುವೆನಲ್ ಫಲಿಸುಗುಮವಕ್ಕೆ ಸೂರಿಗಳಂಜರ್ ||೪೩|| ಎಂದು.

ಆದುದಱಿಂ ಪೆಣ್ಗಳ ಸ್ವಭಾವಕಿದು ಸುಲಭಮೆಂಬಿನಂ ಭಾನುಮತಿಗಂ ನಿರ್ನೆರಂ ಸವನಿಸಿದ ಶಂಕೆಯುಂ ಕಳೆವೆಂ.

**ಭಾನುಮತಿ**—ಸಖಿ! ಸುವಚನೆ! ತನತ್ತು ಮಾರಥಮುದಯಾಚಲಶಿಖರಮಧ್ಯಮನೆಯ್ತುರಲೊಡಂ ಬೆಳಗಿನ ಸಂಜೆಗೆಂಪು ಜಗುೞ್ದುದಱಿಂ ಭಗವಂತಂ ಗಭಸ್ತಿಮಂತಂ ತಳತಳನೆ ಕಣ್ಗೊಳುತಿರ್ದಪಂ.

**ಸುವಚನೆ**—ಒಡತಿ! ಪುಟವಿಟ್ಟ ಪೊನ್ನ ಪುಡಿಗಳ ಪಸರದಂತೆ ಪರಿಶೋಭಿಸುತ್ತೆ ಬಳ್ಳಿವೊದಱ ಸಂದಣಿಯ ಸಂದುಗಳೊಳಗೆ ಪುದಿದು ಪಸರಿಸಿದ ಕದಿರ್ಗಳ ವಿಸರದಿಂದಾರವೆಯನೆಲ್ಲಮಂ ಸಿಂದುರಂಬೊರೆದಂತೆ ಗೆಯ್ದು, ಪೂಣ್ಕೆಯುಂ ಪೂರಿಸಿದವನಂತೆ ಬಿಸುಗದಿರಂ ನೋಡಲಸದಳಮೆನಿಸಿದಂ. ಅದಱಿಂ ರಕ್ತಚಂದನದಿಂದೆಯುಂ ರಕ್ತಕುಸುಮದಿಂದೆಯುಂ ಮಿಶ್ರಮಾದಘ್ರ್ಯದಿಂದಾರಾಧಿಸಲ್ ನಿನಗಿದು ಸಮಯಂ.

**ಭಾನುಮತಿ**—ಸಖಿ ತರಳಿಕೆ! ಅಘ್ರ್ಯಪಾತ್ರಮಂ ತಾರ; ಭಗವಂತನಾದ ಸಾಸಿರ್ಗದಿರನ ಪೂಜೆಯನೀಡೇಱಿಪೆಂ.

**ಚೇಟಿ**—ಒಡತಿ ಬೆಸಸಿದಂತೆ (ಎಂದು ಪೋಗಿ ಮಗುೞ್ದು ಕೈಕೊಂಡು) ಒಡತಿ! ಇದೆಕೊಳ್ ಅಘ್ರ್ಯಪಾತ್ರಂ; ಪೂಜ್ಯನಾದ ಸಾಸಿರ್ಗದಿರನ ಸಪರ್ಯೆಯನೀಡೇಱಿಸು.

**ದುರ್ಯೋಧನಂ**—ಇನಿಯಳ ಬೞಿಗೆಯ್ದಲಿದುವೆ ತಕ್ಕವಸರಂ (ಎಂದು ಬೞಿಸಾರ್ದಪಂ).

**ಸಖಿ**—(ನೋಡಿ, ಆತ್ಮಗತಂ) ಇದೇಂಗಡ? ಮಾರಾಯಂ ಬಿಜಯಂಗೆಯ್ದಂ; ಅಕಟ! ಈಕೆಯ ನೋಂಪಿಗೆ ಬನ್ನಮೊದವಿತು.

**ಭಾನುಮತಿ**—(ನೇಸಱಿದಿರೊಳ್ ನಿಂದು) ಆಕಾಶಮಹಾಸರೋವರಕ್ಕೊಂದೆ ಪದುಮವುಂ, ಪೂರ್ವದಿಗಂಗನಾವದನಕೆ ಪಸದನಮಾದ

ಕುಂಕುವಬಟ್ಟುಂ, ಜಗಕೆಲ್ಲಮೊಂದೆ ರನ್ನವೆಳಗುವಮಾದೆಲ್ಲೈ ಭಗವಂತನೆ! ಈಕನಸಂ ಕಂಡುದಱಿಂದತ್ಯಾಹಿತಮೇನಾನುಮಿರ್ಪೊಡೆ ಪೂಜ್ಯನಪ್ಪ ನಿನ್ನ ಹಸಾದದಿಂದದು ಸಹೋದರಸಮೇತಂಗಾರ್ಯಪುತ್ರಂಗೆ ಶುಭಕರ ಮಾಗಿ ಪರಿಣಮಿಕೆ. (ಎಂದರ್ಘ್ಯಮನಿತ್ತು) ಸಖಿ! ತರಳಿಕೆ! ಇತರ ದೇವತೆಗಳ ಪೂಜೆಯನೊಡರಿಸಲ್ಕೆ ಪೂಗಳನೆನಗೆ ತಂದುಕುಡ (ಎಂದು ಕೈಗಳಂ ನೀಡುವಳ್.)

**ದುರ್ಯೋಧನಂ**—(ಸನ್ನೆಯಿಂ ಪರಿಜನಮನಟ್ಟಿ ತಾನೆ ತಂದಿಡುತ್ತೆ ಸ್ಪರ್ಶಸುಖಮನನುಭವಿಸಿ ಪೂಗಳಂ ನೆಲಕ್ಕೆ ಕೆಡೆವುವಂ)

**ಭಾನುಮತಿ**—(ಕನಲ್ದು) ಎಟ್ಟುಱಿಲ್ಲಂ ಪರಿಜನಕೆ (ಮರಲ್ದು ರಾಯನಂ ಕಂಡು ಭಯಮುಂ ನಾಣಂ ನಟಿಪಳ್.)

**ದುರ್ಯೋಧನಂ**—ದೇವಿ! ಇಂತಪ್ಪ ಸೇವಾಸಂದರ್ಭದೊಳ್ ಈ ಪರಿಜನಂ ಅನಿತುಜಾಣ್ಮೆಯುಳ್ಳುದಲ್ತು; ನೆಟ್ಟನೆ ಸೇವಿಪಂತೆ ದೇವಿ ಬೆಸಸ ಲಪ್ಪುದು. ಎಲೆ ಪ್ರಿಯೆ!

ನಿಡುವೆಳ್ಗ ಡೆಗಣ್ಣೋಟಮ |
ನಿಡು ಪರಿಜನಮೆನಿಪ ನನ್ನೊಳಂಜಿಕೆವಿಡು ನೀಂ ||
ನಡೆ ನುಡಿ ನಗುತಿನಿದೆನೆ ನ |
ನ್ನೊಡನೀಕ್ಕೈಪೊಗಸೆ ನಿನ್ನ ಸೇವೆಗೆ ನೆಱೆಗುಂ ||೪೪||

**ಭಾನುಮತಿ**—ಆರ್ಯಪುತ್ರನನುಜ್ಞೆಯನೀಯವೇಟ್ಕುಂ ಎನಗಾ ವುದಱೊಳೋ ಒಂದುನೋಂಪಿಯೊಳ್ ಅಭಿಲಾಷೆಯಿರ್ಕ್ಕುಂ.

**ದುರ್ಯೋಧನಂ**—ನಿನ್ನ ಕನಸಿನ ವೃತ್ತಾಂತಮನೆಲ್ಲಮನಾಂ ಬಿತ್ತರದಿನಾಲಿಸಿದೆಂ; ಅದಱಿಂ ಸ್ವಭಾವಸುಕುಮಾರಮನೀಯೊಡಲಂ ಕ್ಲೇಶಂಗೊಳಿಪುದು ಸಾಲ್ಗುಂ.

**ಭಾನುಮತಿ**—ಆರ್ಯಪುತ್ರ! ಎನಸುಮೆನಗೆ ಶಂಕೆ ಬಾಧಿಕುಂ ಅದಱನಾರ್ಯಪುತ್ರನನುಮತಿಪುದು.

**ದುರ್ಯೋಧನಂ**—(ಸಂತಸದಿಂ) ದೇವಿ! ಸಾಲ್ಗುಂ; ಈಶಂಕೆಬೇಡಂ.

ಎಲೆ ನೀನಿಂತು ಬೞಲ್ದೊಡಾವರಿಸಿ ಭೂಪಂ ಕಂಪಿಸಕ್ಷೌಹಿಣೀ |
ಬಲಸಂದೋಹದಿನೇನದೇಂ ಗುರುವಿನಿಂದೇಂ ಕರ್ಣಬಾಣಂಗಳಿಂ ||
ನಲವಿಂದಿರ್ದಪೆ ಮತ್ಸಹೋದರಮಹಾಬಾಹಾವನಚ್ಛಾಯೆಯೊಳ್ |
ವಿಲಸತ್ಕೌರವಕೇಸರೀಂದ್ರಸತಿ ನೀನೇಂಕಾರಣಂ ಶಂಕಿಸಲ್ ||೪೫||

**ಭಾನುಮತಿ**—ಆರ್ಯಪುತ್ರ! ನೀಂ ಸನಿಹದೊಳಿರೆ ಶಂಕೆಗೇನುಂ ಕಾರಣಮಿರದು. ಪೞತೇನೆನೆ, ಆರ್ಯಪುತ್ರನ ಮನೋರಥಂಗಳ್ ಸಿದ್ಧಿಸುಗೆಂದು ಅಭಿನಂದಿಪೆಂ.

**ದುರ್ಯೋಧನಂ**—ಎಲೆ ಪ್ರಿಯೆ! ಆಂ ನಿನ್ನೊಡಗೂಡಿ ಸ್ವಚ್ಛಂದದಿಂ ಬಿನದಿಸುತಿರ್ದಪೆಂಗಡಾ. ಎನ್ನ ಮನೋರಥಂಗಳಿನಿತೆ ದಲ್. ನೋಡು—

ಪುದಿದುದ್ಯತ್ಪ್ರೇಮದಿಂ ನಿಶ್ಚಲತೆದಳೆದ ನೇತ್ರಂಗಳಂ ತಾಳ್ದ ರಾಜೀ | ವದ ಚೆಲ್ವಂ ತೂಳ್ದ ನಾಣಿಂ ಮೊಱೆಯುದೆ ನುಡಿಯುಂ ಸುಸ್ಮಿತಂಬೆತ್ತು ಕಣ್ಗೊ || ಪ್ಪಿದ ನಿನ್ನಾಸ್ಯೇಂದುವಂ ನಾಂ ವ್ರತಪರಿಹೃತಲಾಕ್ಷಾಂಕಬಿಂಬೋಷ್ಠಮಂ ಚೆಂ | ದದಿನೀಂಟಲ್ ವಾಂಛಿಪೆಂ ದುರ್ಲಭವೆನಿಪುದು ದುರ್ಯೋಧನಂಗಿನ್ನದೇಂ ಪೇೞ್ ||೪೬||

(ನೇಪಥ್ಯದೊಳ್ ಪಿರಿದುಂ ಕಲಕಲಮಪ್ಪುದು; ಎಲ್ಲರುಮಾಲಿಪರ್)

**ಭಾನುಮತಿ**—(ರಾಯನನಪ್ಪಿಗೊಂಡು) ಆರ್ಯಪುತ್ರಂ ರಕ್ಷಿಸುಗೆ; ಆರ್ಯಪುತ್ರಂ ರಕ್ಷಿಸುಗೆ.

**ದುರ್ಯೋಧನಂ**—(ಸುತ್ತಲುಂ ನೋಡಿ) ಪ್ರಿಯೆ! ಸಾಲ್ಗುಂ, ಅಂಜವೇಡ; ನೋಡ, ಎಲೆ ಭೀರು!

ಪರಿದೀಡಾಡಿ ಮರಂಗಳಂ ದೆಸೆಗಳೊಳ್ ಬಾನೊಳ್ ತೃಣವ್ಯಾಪ್ತಲೋ | ಲರಜೋದಂಡವನೊಡರ್ಚ್ಚಿ ಮೇಣ್ ನೞುಜುಗಲ್ಲುಯ್ದುಧ್ವ

ಡೊಳ್ ರೊಯ್ಯನಲ್ || ತರುಸಂಘರ್ಷದೆ ಧೂಮಮೊಂದಿ ಜಲದಂ ಬೊಲ್ ಸೌಧಕುಂಜಂಗಳೊಳ್ | ಕರಮುದ್ಘೋಷಿಸಿ ಚಂಡಕೃತ್ಯಮೆಲರೆತ್ತಂ ತೀಡುಗುಂ ಭೀತಿಯೇಂ ? ||೪೭||

**ಸಖಿ**—ಮಹಾರಾಜನೆ ! ಮಂದಾರಪರ್ವತಮೆಂಬೀಕರುಮಾಡಕೆ ಬಿಜಯಂಗೆಯುವೇೞ್ಕುಂ. ಪಿರಿದುಂ ಮುಸುಕಿದ ಪರಾಗದಿಂ ದಿಟ್ಟಿ ಮುಸುಳ್ವಂತೆಯುಂ, ಪಟಪಟನೆ ಮುಱಿದ ಮರಗಳ ಸಪ್ಪುಳ್ಗೆ ಪೆಱಬಿಲಾಯುದತ್ತಣಿಂದೋಡುತಿರ್ಪ್ಪ ಕುಲೀನಂಗಳೆನಿಪ ಕುದುರೆಗಳಿಂ ಜನದದಾರಿ ಪರ್ಯ್ಯಾಕುಲಮಪ್ಪಂತೆಯುಂ ಗೆಯುತಗುರ್ವಿಸಿಯೆಡೆವಿಡದೆ ತೀಡುತೀ ಬಿಱುಗಾಳಿಯುಬ್ಬೆಗಮನೊಡರ್ಚುತಿರ್ಕ್ಕುಂ.

**ದುರ್ಯ್ಯೋಧನಂ**—(ಸಂತಸದಿಂ, ಸ್ವಗತಂ) ಈ ಸುಟ್ಟುರೆ ನೆರವಿ ದುರ್ಯ್ಯೋಧನಂಗುಪಕಾರಿಯಲ್ತೆ ? ಯತನಮೇನುಮಿಲ್ಲದಿರೆಯುಮಿದಱ ಹಸಾದದಿಂ ದೇವಿ ನೋಂಪಿಯನುೞಿದು ಎನ್ನೀಮನೋರಥಮನೀಡೇಱಿಸಿದಳ್. ಅದೆಂತೆನೆ—

ಧರಿಸಿದಳಿಲ್ಲ ಭ್ರೂಕುಟಿಯನಶ್ರುವನಾಂತಳುಮಿಲ್ಲ ಮೇಣ್ ಮೊಗಂ |
ದಿರುಪಿದಳಿಲ್ಲ ಬಾರಿಸಿದಳಿಲ್ಲೆದೆ ಸೋಂಕುವ ನನ್ನನಾಣೆಯಿಂ ||
ಇಱುಕೆ ಕುಚದ್ವಯಂ ಭಯದಿನಪ್ಪಲುಪಕ್ರಮಿಸಿರ್ಪಳೀಗಳೀ |
ಯರಸಿಯ ನೋಂಪಿಯಂ ಕಿಡಿಪ ಕೂರೆಲರೆನ್ನಯ ಮಿತ್ರನಲ್ಲಮೇಂ||೪೮||

ಅದಱಿಂ ಪೂರ್ಣಮನೋರಥನಾದ ನಾನೀಗಳ್ ಮನಮೊಲ್ವಂತೆ ವಿಸಟಂಬರಿದು ವಿಹರಿಸಲಕ್ಕುಂ (ಪ್ರಕಾಶಂ) ಎಲೆದೇವಿ ! ಆದೊಡೆ ಇತ್ತಲ್ ಮಂದಾರಪರ್ವತಪ್ರಾಸಾದಮನೆ ಎಯ್ದುವಂ.

(ಎಲ್ಲರುಂ ಸುಟ್ಟುರೆಯ ಬಾಧೆಯನಭಿನಯಿಪರ್)

**ದುರ್ಯ್ಯೋಧನಂ**—

ನಡೆ ಮೆಲ್ಲಮೆಲ್ಲನಡಿಗಳ |
ನಿಡುತೆ ಘನೋರುವೆ ! ಬಿಡಿಂತು ನಡುಕದ ನಡೆಯಂ ||

ಪಿಡಿದು ನಳಿತೋಳ್ಗಳಿಂದಂ |
ಬಿಡದಾಲಿಂಗಿಸು ಮದೀಯವಕ್ಷಸ್ಸ್ಥಲಮಂ ||೪೯||

(ಪ್ರಾಸಾದಪ್ರವೇಶಮನಭಿನಯಿಸಿ) ಈಗರ್ಭಗೃಹಂ ಸುತ್ತಲುಂ ನೀರಂಧ್ರಮಾಗಿರ್ಪುದಱಿಂ ಎಲರ್ ಒಳವುಗಲಾಗದು. ದೂಳ್ಗಡಣಮಂ ಕೊಡೆಪಿ ನೆಟ್ಟನೆ ಕಣ್ದೆಡು.

**ಭಾನುಮತಿ**—(ಸಂತಸದಿಂ) ಬಿಡದೆ ಬಿಱ್ರನೆ ಬೀಸುತಿರ್ದ ಬಿಱುಗಾಳಿಯು ಪೊಯ್ಲು ದೈವಯೋಗದಿನಡಂಗಿದುದು.

**ಸಖಿ**—ಮಹಾರಾಜನೆ! ಭೋಂಕನೆ ಪತ್ತಿದುದಱಿಂ ಪ್ರಿಯಸಖಿಯ ತೊಡೆಯೆರಡುಂ ನಡುಗುಗುಂ; ಮಹಾರಾಜನದೇಕೆ ಪೀಠವೇದಿಯನಳಂಕರಿಸದಿರ್ಪುದು?

**ದುರ್ಯೋಧನಂ**—(ದೇವಿಯಂ ನೋಡಿ) ಬಿಱುಗಾಳಿಯ ರಭಸದಿಂ ದೇವಿಗೆ ಸಮನಿಸಿದ ಬನ್ನಂ ಕಿಱಿದೆ ವಲಂ. ಅಂತಲ್ತೆ—

ಕಿಱಿದೆನೆಯುಂ ರಜಂ ಪಿರಿದುಬಾಧೆಯನೀವುದು ನೇತ್ರದೈರ್ಘ್ಯದಿಂ |
ಸರಮಲೆದಾಡೆ ಪೊಯ್ಲುಮುರಮಂ ಮೊಲೆವಿಣ್ಪಿನಿನಲ್ಪಕಂಪಮುಂ ||
ಗುರುಜಘನಂಗಳಿಂ ನಡುಗುಗುಂ ತೊಡೆಗಳ್ ನಸು ಪಜ್ಜೆಯಿಟ್ಟೊಡಂ |
ಮರುತನೊಡಚ್ಚುಗುಂ ಮಿಗೆ ಕೃಶಾಂಗಿಗೆ ಖೇದಮನಂಗಸಾಹ್ಯದಿಂ ||

(ಎಲ್ಲರುಂ ಕುಳ್ತರ್)

**ದುರ್ಯೋಧನಂ**—ದೇವಿಯದೇಕೆ ಬಱಿದಪ್ಪ ಕಠಿನಶಿಲಾತಲದಲ್ಲಿ ಕುಳ್ದುಂ? ಎಲೆ ಕರಭೋರು!

ಚೇಲಂ ಚಲಿಸುವಿನಂ ನ |
ನ್ನೀಲೋಚನಕೆಸೆವ ನಿನ್ನ ಜಘನಮನಿರಿಸಲ್ ||
ಲೋಲಾಂಬರಮೆನಿಸುತೆ ನಿ |
ನ್ನಾಲಿಯನೆಟಿವಿದುವೆ ಸಾಲ್ಗುಮೆನ್ನೂರುಯುಗಂ ||೫೧||

(ಬಟಿಕೆ ಕಂಚುಕಿ ಸಂಭ್ರಾಂತನಾಗಿ ಪಟಾಕ್ಷೇಪದಿಂ ಪುಗುವಂ)

**ಕಂಚುಕಿ**—ಮುಱಿದುದು ಮುಱಿದುದು ; ಮಹಾರಾಜನೆ!

(ಎಲ್ಲರುಂ ಭಯಾಕುಲರಾಗಿ ನೋೞ್ಪರ್)

**ದುರ್ಯೋಧನಂ**—ಆವುದು ?

**ಕಂಚುಕಿ**—ಮಹಾರಾಜನೆ! ಭೀಮನಿಂ.

**ದುರ್ಯೋಧನಂ**—ಆಃ! ಏನಂ ಬಗುಳ್ದಪೆ?

**ಭಾನುಮತಿ**—ಆರ್ಯ! ಏನತ್ಯಾಹಿತಮುಂ ಬಗೆವಾ ?

**ಕಂಚುಕಿ**—(ಭಯಂಗೊಂಡು) ದೇವಿ! ಪೇೞ್ದಪೆಂಗಡಾ! ಎಲ್ಲಮುಂ ಮುಱಿದುದು ಭೀಮನಿಂ—ಎಂದು.

**ದುರ್ಯೋಧನಂ**—ಚೀಃ, ಮಾತುವಣಿಗ! ಜರಠಾಧಮ! ಈಗಳದೇಂ ನಿನಗಱಿಯಮೆ ?

**ಕಂಚುಕಿ**—ಅಱಿಯಮೆಯೇನುಮಿಲ್ಲಂ; ನನ್ನಿಯಿದು.

ಮುಱಿದುದು ಭೀಮನಿನನಿಲನಿ |
ನರಸನೆ ನಿನ್ನೆಸೆವ ತೇರ ಪಟಾಯಿಗೆಯಾಗಳ್ ||
ಧರಣೀತಲದೊಳ್ ಬಿೞ್ದುದು |
ಕಿಱುಗಂಟಿಗಳುಲಿಯೆ ರೋದನಂಮಾಡುವವೋಲ್ ||೫೨||

**ದುರ್ಯೋಧನಂ**—ಬೆಟ್ಟತಪ್ಪೆಲರ ರವಸಿನಿಂ ಜಗಮೆ ಕಂಪಿಸುತ್ತಿರೆ ತೇರ ಪಟವಿಗೆಯೊಂದು ಮುಱಿದುದರ್ಕ್ಕೆ ಅದೇಂ "ಮುಱಿದುದು ಮುಱಿದುದು" ಎಂದು ಉದ್ಧತನಾಗಿ ಬಗುಳ್ದಪೆ?

**ಕಂಚುಕಿ**—ಮಹಾರಾಜನೆ! ಏನುಮಿಲ್ಲಂ. ಪೆಱತೇನೆನೆ, ಈ ವುತ್ಪಾತದ ಪರಿಹಾರಕೆ ಒಡೆಯನೊಳ್ ಬಿನ್ನವಿಸವೇೞ್ಕುಮೆಂದು ರಾಯವಕುತಿಯೆನ್ನಂ ನುಡಿಯಿಕುಂ.

**ಭಾನುಮತಿ**—ಆರ್ಯಪುತ್ರ! ಉತ್ಪಾತಮಿದು ಒಸೆದ ವಸುಮತೀಸುರರ ಸ್ವಸ್ತಿವಾಚನದಿಂ ಪರಿಹೃತಮಕ್ಕೆ.

**ದುರ್ಯೋಧನಂ**—(ತಿರಸ್ಕಾರಭಾವದಿಂ) ಪೋ; ಪುರೋಹಿತ ಸುಮಿತ್ರಂಗಳುಪು.

**ಕಂಚುಕಿ**—ಮಹಾರಾಜಂ ಬೆಸಸಿದಂತೆ (ಎಂದು ಪೋಪಂ).

(ಬಟಿಕೆ ಪಡಿಯುಱಿತಿ ಪುಗುವಳ್)

**ಪಡಿಯುಱಿತಿ**—(ಭಯಾಕುಲೆಯಾಗಿ ಬಟಿಸಾರ್ದು) ಜಯಮಕ್ಕೆ ಮಹಾರಾಜಂಗೆ ಜಯಮಕ್ಕೆ. ಮಹಾರಾಜ! ಅಳಿಯಂದಿರಾದ ಜಯದ್ರಥಮಹಾರಾಜರ ಮಾತೆಯುಂ ದುಶ್ಶಳೆಯುಂ ಪುದಿಯೊಳ್ ನಿಂದಿರ್ದಪರ್.

**ದುರ್ಯೋಧನಂ**—(ಆತ್ಮಗತಂ) ಏಂ ಜಯದ್ರಥಜನನಿಯುಂ ದುಶ್ಶಳೆಯುಂ? ಅಭಿಮನ್ಯುವಂ ಕೊಂದುದಱಿಂ ಪಿರಿದುಂ ಕನಲ್ದ ಪಾಂಡವರ್ ಏನಾನುಮತ್ಯಾಹಿತಮಪ್ಪಂತೆ ಚೇಷ್ಟೆಗೆಯ್ದಿರ್ಪರಕ್ಕುಂ; ಇರ್ಕೆ. (ಪ್ರಕಾಶಂ) ಪೋಗು; ಬೇಗದಿಂ ಪುಗಿಸು.

**ಪಡಿಯುಱಿತಿ**—ಸ್ವಾಮಿಯ ಅಣತಿಯಂತೆ (ಎಂದು ಪೋಪಳ್)

(ಬಟಿಕೆ ಜಯದ್ರಥನ ಮಾತೆಯುಂ ದುಶ್ಶಳೆಯುಂ ಪೊಕ್ಕಪರ್)

**ಇರ್ವರುಂ**—(ಕಣ್ಣೀರಿಕ್ಕುತ್ತೆ ದುರ್ಯೋಧನನ ಕಾಲ್ಗಳೊಳ್ ಬೀೞ್ವರ್)

**ಜಯದ್ರಥನ ಮಾತೆ**—ಕೌರವೇಂದ್ರಂ ರಕ್ಷಿಕೆ ರಕ್ಷಿಕೆ.

**ದುಶ್ಶಳೆ**—(ಅೞ್ವಳ್)

**ದುರ್ಯೋಧನಂ**—(ಭೋಂಕನೆೞ್ದು) ತಾಯೆ! ಸಮಾಧಾನಮೊಂದು ಸಮಾಧಾನಮೊಂದು. ಅದೇಂ ಮಹಾಭಯಂ? ಸಮರಾಂಗಣದೊಳ್ ಅಪ್ರತಿಹತರಥಂಗೆ ಜಯದ್ರಥಂಗೆ ಪದುಳಂ ಗಡಾ?

**ಮಾತೆ**—ವತ್ಸ! ಅವಂಗೆ ಪದುಳಮೆಲ್ಲಿ?

**ದುರ್ಯೋಧನಂ**—ಅದೇಕೆ?

**ಮಾತೆ**—(ದುಗುಡದಿಂ) ಕುವರನ ವಧೆಯಿಂ ಕನಲ್ದು ಕಿಡಿಕಿಡಿವೋಗಿ ಪಜ್ಜಳಿಸುತಿರ್ಪ ಗಾಂಡೀವಿಯಿಂದು ಬೆಂಗದಿರಂ ಮುೞುಗದಿರ್ಪನಿತಱೊಳ್ ಅವನಂ ಕೊಲ್ವೆನೆಂದು ಪೂಣ್ದಂ.

**ದುರ್ಯೋಧನಂ**—(ನಗುತ್ತೆ) ಮಾತೆಯುಂ ದುಶ್ಶಳೆಯುಂ ಕಣ್ಣೀರಿಡಲಿದುವೆ ಕಾರಣವೋ? ಪುತ್ರಶೋಕೋನ್ಮತ್ತನರ್ಜುನಂ ಮನಕೆ ತೋಱಿದಂತೆ ಜಱಿಚಿದುದಱಿಂದೀಯವತೆಯೋ? ಅಬಲೆಯರ ಬೆಳ್ಪನ ಮಚ್ಚರಿಯನೊಡರಿಕುಂ. ಮಾತೆ! ಸಾಲ್ಗುಂ; ಮುಮ್ಮಲಂಮಱುಗುವುದೇಕೆ? ವತ್ಸೆ! ದುಶ್ಶಳೆ! ಸಾಲ್ಗುಂ; ಇಂ ಕಣ್ಣೀರಿಡವೇಡ ದುರ್ಯೋಧನನ ಬಾಹುದಂಡದಿಂ ಪರಿರಕ್ಷಿತನಾದ ಜಯದ್ರಥಂಗೆ ಕೇಡನೆಸಗುವನಿತ್ತು ಆರ್ಪು ಆಅರ್ಜುನಂಗೆತ್ತಣ್ತು?

**ಮಾತೆ**—ವತ್ಸ! ಬಂಧುಜನಸಂಹಾರದಿಂ ದಳ್ಳಿಸುವ ಕೋಪಾಗ್ನಿಗಡಪ್ಪಾರ್ಗಿ ತುಟಿಲಾಳ್ಗಳ್ ಒಡಲ ಮೇಲೆಯುಂ ದಿಟ್ಟಿಯಿಲ್ಲದೆ ತಮ್ಮದಟಂ ಮೆಱೆದಪರ್.

**ದುರ್ಯೋಧನಂ**—(ಹಾಸ್ಯದಿಂ) ಅಪ್ಪುದು; ಪಾಂಡವರ ಕೋಪಂ ಜಗತ್ಪ್ರಸಿದ್ಧಮೆ ಆಗಿರ್ಕ್ಕುಂ ನೋಡ; ತಾಯೆ!

ಜನಪಾಲಸ್ತೋಮಮಾಸ್ಥಾನದೆ ನೆರೆದಿರೆಯೆನ್ನಾಜ್ಞೆಯಂ ತಾಳ್ದು
ದುಶ್ಶಾ | ಸನನೆಳ್ದಾ ಲೋಲಕೇಶಾಂಬರಮೆಱೆಯುತುಮುಲ್ಲಿಯ್ದ ಪಾಂ
ಚಾಲಿಯಂ ನೆ || ಟ್ಟನೆ ಗೌರ್ಗೌಃ ಎಂದೆವಂದರ್ಜುನನಿರನೆ ಲಸ
ದ್ಗಾಂಡಿವಂ ಕ್ಷತ್ರಿಯಂ ಜೌ | ವನಿಗಂ ಕಟ್ಟಾಳೆನಿಪ್ಪಂಗದು ಬಗೆವೊಡೆ
ಪೇೞಲ್ಲಮೇ ಕೋಪಮೂಲಂ ||೫೩||

**ಮಾತೆ**—ವತ್ಸ! ಕಡಿದಪ್ಪ ಪೂಣ್ಕೆ ಪೂರ್ಣಮಾಗದೊಡೆ ಆತ್ಮಹತಿಯುಮಂ ಪೂಣ್ದಿಪ್ಪರ್ಂ.

**ದುರ್ಯೋಧನಂ**—ಇಂತಿಪ್ಪೊಡೆ ಸಂತಸಂಬಡುವೆಡೆಯೊಳ್ ದುಗುಡಂಗೊಳ್ವುದೇಕೆ? ಯುಧಿಷ್ಠಿರಂ ಸಹೋದರರೆರ್ವರಸು ಮಡಿದನೆಂದು ಪೇೞವೇೞ್ಕುಂಗಡಾ? ಅನಿತೆ ಅಲ್ತು; ಮಾತೆ! ನೂರ್ವರ್ ಕೌರವರ್ ನೆರವಾಗಿರ್ಪುದಱಿಂ ಮಾಮ್ಯೆಮೆವೆರ್ಚ್ಚು ಕೃಪಕರ್ಣದ್ರೋಣಾಶ್ವತ್ಥಾಮಾದಿಮಹಾರಥರಿಂದಿರ್ಮಡಿವೆತ್ತು ವಿಕ್ರಮಮಂ ಪಡೆದಿರ್ಪ

ನಿನ್ನ ಕುವರನ ಪೆಸರನೆತ್ತಲುಂ ಅರ್ಜುನಂಗವೊ ವೋೞ್ ಪೆಱಂಗವೊ ಶಕ್ತಿಯೆತ್ತಣ್ಣು? ಎಲೌ ಮಗನದಟನಱಿಯದಳೆ!

ಬಿಡುಬಿಡು ಧರ್ಮನಂದನನ ವೋೞ್ ಯಮಳರ್ಕಳ ಮಾತನೇಂ ಗಡಾ | ನುಡಿವುದು ಭೀಮಪಾರ್ಥರೊಳವಂದಿರೊಳಾರಯಲೊರ್ವನಾ ದೊಡಂ || ಗಡಣದೆ ನಿಂದ ಬಿಲ್ವಡೆಯ ಮಧ್ಯದೊಳೊಪ್ಪುವ ಸಿಂಧು ರಾಜನಂ | ಪಡೆಯೊಡಗೂಡಿ ಮುಂಬರಿದಿದಿರ್ಚಿ ನಿರೋಧಿಸಲಾವ ನಾರ್ತಪಂ ||೫೪||

**ಭಾನುಮತಿ**—ಆರ್ಯಪುತ್ರ! ಇದುಂಟು. ಆದೊಡಂ ಅರ್ಜುನಂ ಕಡಿದೆನೆ ಪೂಣ್ಕೆಗೆಯ್ದಿರ್ಪನೆಂಬುದಱಿನಂಜವೇೞ್ಕುಂ.

**ಮಾತೆ**—ವತ್ಸೆ! ಸಾಧು; ನೀಂ ಸಮಯಕೆ ತಕ್ಕುದಂ ಬಗೆದಯ್.

**ದುರ್ಯೋಧನಂ**—ಆಃ! ಈದುರ್ಯೋಧನನುಂ ಪಾಂಡವರ್ಗಂಜ ವೇೞ್ಕುಮೆ? ನೋಡ;

ಧೃತಚಾಪಜ್ಯಾಕಿಣರ್ ಮೇಣಗಣಿತರಿಪುಗಳ್ ವರ್ಮವಿಭ್ರಾಜಿತರ್ ಶ್ಲಿ | ಷ್ಟತತಚ್ಛತ್ರಂಗಳಿಂ ಪಾಂಡುರವನಜವನಭ್ರಾಂತಿಯಂ ಗೈವ ರಾದು || ದ್ಧತಮತ್ತೋದರ್ಯರಿಂದಂ ಮೆಱೆವ ಪಡೆಗಳಾ ಕೋಟಿಗಳ್ ನೇಸಱಂ ಮು | ಚ್ಚುತೆ ದೂಳಿಂ ಬಾಳ್ಗಳಂ ಬಿಚ್ಚುತೆ ಮಿಗೆ ರಣ ದೊಳ್ ಸುತ್ತಲುಂ ಬಂದು ಸೇರ್ಗುಂ ||೫೫||

ಅಲ್ಲದೆಯುಮೆಲೆ ಎಲೇ ಭಾನುಮತಿ! ಪಾಂಡವರದಟನಱಿತ ವಳೆ! ನೀನುಮಿಂತು ಶಂಕಿಪೆಯಾ?

### || ಪಿರಿಯಕ್ಕರಂ ||

ಭರದೆ ದುಶ್ಶಾಸನೋರಸ್ಸ್ಥಲಸ್ಥಿತಮಂ ಬಿಸುನೆತ್ತರಂ ಪೀರ್ವುದ ಱೊಳ್ | ಕರದ ಗದೆಯಿಂದೆ ಪೊಯ್ದುಪ್ಪಳಿಸಿ ದುರ್ಯೋಧನನೂರು

ಯುಗಮಂ ಸೀಳ್ವುದಱೊಳ್ || ಅರರೆ ತುಱಿಲಾಳ್ಗಳೆನಿಸಿಕೊಂಡಿರ್ಪರ್
ಪಾಂಡುಕುಮಾರರಾ ಪೂಣ್ಕೆಯೇತೆಱನೋ | ಧುರದೊಳಾಜಯದ್ರಥನಂ
ಕೊಲ್ವುದಱೊಳವಾತೆಱನೆಂದು ತಿಳಿಯವೇಳ್ಕುಂ ||೫೬||

ಎಲೆ! ಅದಾವನಿಲ್ಲಿ? ಎನ್ನ ವಿಜಯರಥಮಂ ತಾರ. ಆಂ ಜಯದ್ರಥನಂ ರಕ್ಷಿಪುದಱಿಂದಮೆ ಪಂದೆಯಾ ಅರ್ಜುನಂ ಪುಸಿಪೂಣ್ಕೆಯಿಂ ನಾಣ್ಚಿ ಶಸ್ತ್ರಪರಿಪೂತಮಲ್ಲದ ಮೃತಿಯನೊಂದುವಂತೆ ಮಾೞ್ಪೆಂ.

**ಕಂಚುಕಿ**—(ಪೊಕ್ಕು).

ನೆಲದಭಿಘಾತದಿಂ ಚಲಿಸಿ ನಾದಿಪ ಪೊಂಗಿಱುಗಂಟೆಸಾಲ್ಗಳಿಂ |
ವಿಲಸಿತಲಂಬಕದ್ವಿಗುಣಿತೋತ್ತಮಚಾಮರಭೂಷಣಂಗಳಿಂ ||
ಚಲಿಸುತುಮಾಕುಲಿಪ್ಪ ನಿಗೃಹೀತಮಹಾತುರಗಂಗಳಿಂ ಸಮು |
ಜ್ಜ್ವಲಿಪಿದು ಸಜ್ಜಮಿರ್ಪುದು ನಿನತ್ತು ಹತಾರಿಮನೋರಥಂ ರಥಂ ||

**ದುರ್ಯೋಧನಂ**—(ಭಾನುಮತಿಯಂ ಕುಱಿತು) ದೇವಿ! ನೀವೊಳಗನೆ ಪುಗಿಂ. ಆನಾಜಯದ್ರಥನಂ ರಕ್ಷಿಪುದಱಿಂದಮೆ ಪಂದೆಯಾ ಅರ್ಜುನಂ ಪುಸಿಪೂಣ್ಕೆಯಿಂ ನಾಣ್ಚಿ ಶಸ್ತ್ರಪರಿಪೂತಮಲ್ಲದ ಮೃತಿಯನೊಂದುವಂತೆ ಮಾೞ್ಪೆಂ.

(ಎಂದೆಲ್ಲರೊಡನೆ ಪೋಪಂ)

ಇಂತಿದು ದ್ವಿತೀಯಾಂಕಂ.



# ತೃತೀಯಾಂಕಂ.

---

(ಬಟಿಕೆ ವಿಕೃತವೇಷೆಯಾದ ರಕ್ಕಸಿ ಪುಗುವಳ್)

**ರಕ್ಕಸಿ**—(ಗಹಗಹನೆ ನಕ್ಕು, ಸಂತಸದಿಂದೆ)

ಹತಮನುಜಮಾಂಸದುಣಿಸಾ |
ಜ್ರಿತಮಾಯ್ತು ಸಹಸ್ರಘಟವಸಾಸಂಸಿಕ್ತಂ ||
ಸತತಂ ಕುಡಿದಪೆನಾಂ ಶೋ |
ಣಿತಮಂ ಶತವತ್ಸರಂಬರಂ ಬಳಿಗೆ ಧುರಂ ||೫೮||

(ಸಂತಸದಿಂ ಕುಣಿಯುತ್ತೆ) ಅರ್ಜುನಂ ಜಯದ್ರಥನ ವಧೆಯ ದಿನ ದಂತೆ ಅನವರತಂ ಅನುವರಮನನುಗೊಳಿಪೊಡೆ ಬಾಡುನೆತ್ತರ್ಗಳಿನೆನ್ನ ಬೀಡು ನೀಡುವೋವರಿವರಂ ತೆಕ್ಕನೆ ತೀವುಗುಂ (ಸುತ್ತಲುಂ ನೋಡಿ) ರುಧಿರ ಪ್ರಿಯನೆತ್ತಲಿಪ್ಪನಕ್ಕುಂ? ಅಕ್ಕೆ; ಕರೆವೆಂ. (ಎಂದು) ರುಧಿರಪ್ರಿಯಾ! ರುಧಿರಪ್ರಿಯಾ!! ಇತ್ತಬಾ.

(ಬಟಿಯುಂ ರುಧಿರಪ್ರಿಯನೆಂಬಂ ರಕ್ಕಸನವಂ ಪುಗುವಂ)

**ರಕ್ಕಸಂ**—(ಪೊಕ್ಕು ಆಯಸಮನಭಿನಯಿಸುತ್ತೆ) ಈಗಳೆ ಹತರಾದವರ ಅಡಗುಂ ಬಿಸುನೆತ್ತರುಂ ಲಭಿಸಿದೊಡೆ ಆಗಳೆನ್ನೀಯಾಯಸಂ ಕ್ಷಣಮಾ ತ್ರದೊಳೆ ಲಘುವೆಂಬಿನಮುಡಂಗುಗುಂ.

**ರಕ್ಕಸಿ**—(ಮತ್ತಮಾರ್ಪಳ್)

**ರಕ್ಕಸಂ**—(ಆಲಿಸಿ) ಅಹಹ! ಅದಾವನೆನ್ನಂ ಕೂಗುಗುಂ (ನೋಡಿ) ಆಃ! ಇದೇಂ? ವಸಾಗಂಧೆ; (ಬಟಿಸಾರ್ದು) ವಸಾಗಂಧೆ! ಏಕೆನ್ನಂ ಕೂಗಿದೆ?

**ರಕ್ಕಸಿ**—ರುಧಿರಪ್ರಿಯ! ಈಗಳೆ ಹತನಾದನದೊರ್ವ್ವಂ ರಾಯ ರಿಸಿಯ ಒಡಲವಯವಂಗಳೊಳ್ ಸಿಲ್ಕಿದ ಬಸೆಯ ನೇಹದಿಂ ನುಣ್ಪುವೆತ್ತು

ಇನ್ನುಂ ಕದುಷ್ಣಮೆನಿಸಿಪ್ಪ ನೆತ್ತರುಮಂ ಮೇಲಾದ ಮಾಂಸಮುಮಂ ಇದೆಕೊಳ್ ನಿನಗೆಂದಿದಂ ತಂದಿರ್ಪೆಂ; ಆದುದಱಿಂ ಸೀರೀರಕ್ತಾಸವಮಂ.

**ರಕ್ಕಸಂ**—ಸಾಧು; ವಸಾಂಗಧೆ! ಸಾಧು. ನೀನೊಳ್ಳಿತಂ ಗೈದೆ. ಬಲ್ಲಿತೆನಗೆ ತೃಷೆ.

**ರಕ್ಕಸಿ**—ಹೀಹೀ!! ರುಧಿರಪ್ರಿಯ! ನಿಹತರಪ್ಪ ಮಾನಸರ ಮತ್ತಮಾನೆಕುದುರೆಗಳ ನೆತ್ತರ್ಗಣಂಗಳ್ ಕಡಲಂತಿಪ್ಪುದಱಿಂ ಗಮಿಸಲರಿದೆನಿಪ ಸಮರಾಂಗಣದೊಳ್ ಸುತ್ತುತಿರ್ದೊಡಂ ನಿನಗೆ ತೃಷೆ ಬಲ್ಲಿತೆಂದೊಡೆ ಆಹಹ! ಅಚ್ಚರಿಯಕ್ಕುಂ.

**ರಕ್ಕಸಂ**—ಸಖಿ! ವಸಾಗಂಧೆ! ಪುತ್ರಶೋಕದಿಂ ಮಮ್ಮಲ ಮಱುಗುತಿರ್ಪಳಂ ಒಡತಿಯಂ ಹಿಡಿಂಬಾದೇವಿಯಂ ನೋಡಲ್ ಪೋಗಿರ್ದೆಂ

**ರಕ್ಕಸಿ**—ರುಧಿರಪ್ರಿಯ! ಒಡತಿ ಹಿಡಿಂಬಾದೇವಿಗೆ ಘಟೋತ್ಕಚಶೋಕಮಿನ್ನುಮುಪಶಾಂತಮಾಯ್ತಿಲ್ಲಮೇ?

**ರಕ್ಕಸಂ**—ಎಲೌ! ಅದೆಂತು ಆಱಲಿದುಪಶಾಂತಮಕ್ಕುಂ? ಆದೊಡೆ, ಅಭಿಮನ್ಯುಶೋಕದಿಂ ಸಮಾನದುಃಖಿಯಾದ ಸುಭದ್ರಾದೇವಿಯುಂ ದ್ರೌಪದಿಯುಂ ಸಂತವಿಡುತಿರ್ದಪರ್.

**ರಕ್ಕಸಿ**—ರುಧಿರಪ್ರಿಯ! ಆನೆದಲೆಯೋಡಿನೊಳ್ ತೆಕ್ಕನೆತೀವಿದ ನಲ್ವಾಡಿನ ಬೆಂಜನಮನಿದಂ ಕೊಳ್; ಪೊಸತಂ ರಕ್ತಮದ್ಯಮುಮನಿದನೀಂಟು.

**ರಕ್ಕಸಂ**—ವಸಾಗಂಧೆ! ನೀನಳುಂಬಮೆನಿತ್ತು ನೆತ್ತರಂ ಮತ್ತಮೆನಿತು ನಲ್ವಾಡಿನ ಬೆಂಜನಮಂ ಗಟಯಿಸಿರ್ಪೆ?

**ರಕ್ಕಸಿ**—ರುಧಿರಪ್ರಿಯ! ಮುಂ ಗಟಯಿಸಿಟ್ಟುದಂ ನೀನೆ ಬಲ್ಲೆ; ಪೊಸತೆನೆ ಗಟಯಿಸಿಪ್ಪುದನಾಲಿಸು; ಭಗದತ್ತನ ನೆತ್ತರ ಹರವಿಯುಂ

ಜಯದ್ರಥನ ಬಸೆಯ ಗಡಿಗೆಯುಂ ದ್ರುಪದವಿರಾಟಭೂರಿಶ್ರವ ಸ್ಸೋಮದತ್ತಬಾಹ್ಲೀಕರ್ ಮುಂತಪ್ಪರಸರ ಮತ್ತಂ ಮತ್ತಿನ ತುಟಿ ಲಾಳ್ಗಳ ರಕ್ತವಸಾಮಾಂಸಂಗಳ ಕೊಡಗಡಣಂಗಳುಂ ಎನ್ನ ಮನೆಯೊಳ್ ನೆರೆದಿರ್ಕುಂ.

**ರಕ್ಕಸಂ**—(ಹರಿಸದಿಂ ಕಟ್ಟಿಕ್ಕೈದು) ಸಾಧು, ಸುಗುಣೆ ಮಡದಿ! ಸಾಧು. ನಿನ್ನೀನಲ್ಪಡದಿತನದಿಂದಮುಂ ಒಡತಿ ಹಿಡಿಂಬಾದೇವಿಯ ಸಂಧಾನದಿಂದಮುಂ ಎನತು ಬಡತನಂ ಪಿಂಗಿದುದು.

**ರಕ್ಕಸಿ**—ರುಧಿರಪ್ರಿಯ! ಒಡತಿ ಗೈದ ಸಂವಿಧಾನಮದೆಂತಹುದು?

**ರಕ್ಕಸಂ**—ಒಡತಿ ಹಿಡಿಂಬಾದೇವಿಯಿಂದು ಎನ್ನಂ ಸಬಹುಮಾನಂ ಕೂಗಿ "ಎಲೆ ರುಧಿರಪ್ರಿಯ" ಇಂದು ಮೊದಲೆನೆ ಯುದ್ಧಾಂಗಣದೊಳ್ ಆರ್ಯಪುತ್ರಭೀಮಸೇನನ ಪಿಂದೆಪಿಂದೆ ಸುತ್ತುತಿರೆಂದು ಆಣತಿಯಿತ್ತಳ್. ಆದಱಿಂದಾತನಂ ಬೆಂಗೊಂಡು ಪೋಗುತ್ತುಂ ಹತರಾದ ಮಾನಸರ ನೆತ್ತರ್ಪೊನಲಂ ನೋಡಿದುದಱಿಂದಮೆ ಪಸಿವುಂ ತೃಷೆಯುಮಡಂಗಿರೆ ನನಗಿಲ್ಲಿಯೆ ಸಗ್ಗಮಾಗಿರ್ಕುಂ. ನೀನುಂ ನಿಶ್ಶಂಕೆಯಾಗಿ ರಕ್ತವಸಾಮಾಂಸಂಗಳಿಂ ತೀವಿದ ಅನೇಕಶತಸಹಸ್ರ ಘಟಂಗಳಂ ಗಟಿಯಿಸಿಡು.

**ರಕ್ಕಸಿ**—ರುಧಿರಪ್ರಿಯ! ಕುಮಾರಭೀಮಸೇನನ ಪಿಂದೆ ಪಿಂದೆಯೇ ಅದೇಕೆ ಸುತ್ತವೇಳ್ಕುಂ?

**ರಕ್ಕಸಂ**—ವಸಾಗಂಧೆ! ಒಡೆಯಂ ಭೀಮಸೇನಂ ದುಶ್ಶಾಸನನ ರುಧಿರಮಂ ಪೀರಲ್ ಪೂಣ್ದಂ. ಅದರ್ಕೆ ರಕ್ಕಸರಾಂ ಆತನೊಳನು ಪ್ರವೇಶಂಗೈದು ಪಾನಂಗೆಯವೇಳ್ಕುಂ.

**ರಕ್ಕಸಿ**—ಸಾಧು ಒಡತಿ! ಸಾಧು. ನೀನೆನ್ನ ನಲ್ಲಂಗೆ ತಕ್ಕ ಸಂವಿಧಾನಮನೆ ಗೆಯ್ದೆ.

(ನೇಪಥ್ಯದೊಳ್ ಮಹಾಕಲಕಲಮಕ್ಕುಂ)

**ರಕ್ಕಸಂ**—(ನೋಡಿ) ವಸಾಗಂಧೆ! ಇದೆ ಧೃಷ್ಟದ್ಯುಮ್ನನಿವಂ ಶಿಖೆವಿಡಿದು ದ್ರೋಣನಂ ಬಾಳಿನರಿಯುತಿರ್ದಪಂ.

**ರಕ್ಕಸಿ**—(ಸಂತಸದಿಂ) ರುಧಿರಪ್ರಿಯ! ಆಮುಂ ಪೋಗಿ ದ್ರೋಣನ ನೆತ್ತರಂ ಪೀರ್ವಂ.

**ರಕ್ಕಸಂ**—ವಸಾಗಂಧೆ! ಇದು ಪಾರ್ವನ ನೆತ್ತರಲ್ತೆ? ಗಂಟಲಂ ಸುಡುತೊಳವುಗುಗುಂ. ಅದಱನಿದಱನೇಂ?

(ನೇಪಥ್ಯದೊಳ್ ಮತ್ತೆ ಕಲಕಲಮುಕ್ಕುಂ)

**ರಕ್ಕಸಿ**—ರುಧಿರಪ್ರಿಯ! ಮತ್ತಮಿಾಕೇಳ್ದುಂ ಮಹಾಕಲಕಲಂ.

**ರಕ್ಕಸಂ**—ವಸಾಗಂಧೆ! ಇತ್ತಲೆ ಅಶ್ವತ್ಥಾಮಂ ಕರವಾಲಂ ಹಿರಿದುಕೊಂಡೀಬಂದಪಂ. ಇವನಹಹ! ಧೃಷ್ಟದ್ಯುಮ್ನರೋಷದಿ ನೆಮ್ಮುಮನೊರ್ಮೆ ಕೊಲ್ವನಕ್ಕುಂ. ಆದುದಱಂ ಬಾ; ಒಡತಿ ಹಿಡಿಂಬಾದೇವಿಯ ಆಣತಿಯನೊಡಚ್ಚುರ್ವಂ. (ಎಂದಿರ್ವರುಂ ಪೋಪರ್).

## || ಇಂತಿದು ಪ್ರವೇಶಕಂ ||

(ಬೞಿಕಶ್ವತ್ಥಾಮಂ ಕಡುಗಮಂ ಬಿಚ್ಚಿಕೊಂಡು ಕಲಕಲಮನಾಲಿಸುತ್ತೆ ಪುಗುವಂ).

ಪ್ರಳಯೋದ್ಘಾತಮಹಾಮರುತ್‌ಕ್ಷುಭಿತಮಾದಾಪುಷ್ಕರಾವರ್ತಕಂ |
ಗಳಿನುಜ್ಜೃಂಭಿಸಿದುಗ್ರಮಾದ ಮೊಱಗಂ ಪೋಲುತ್ತೆ ಮುಚ್ಚುತ್ತೆ ಬಾಂ ||
ದಳಮಂ ಭೂತಳಮಂ ಶ್ರುತಿಪ್ರಕಟಮಾಗಿರ್ಪೀಮಹಾರಾವಮಿಾ |
ಗಳಪೂರ್ವಂ ಪಲಸೂಱದೇಕೆ ಸಮರಾಂಭೋರಾಶಿಯಿಂದುಣ್ಮುಗುಂ ||

(ಚಿಂತಿಸಿ) ನಿಕ್ಕುವಂ ಪಾರ್ಥನೋ ಸಾತ್ಯಕಿಯೋ ಭೀಮಸೇನನೋ ಹರಯದ ಕೊರ್ವಿನಿಂ ಮರ್ಯಾದೆಮಿಾಱ ಕನಲ್ಕೆಯನೊಡಚ್ಚಿರ್ದುದಕ್ಕೆ ತಾತಂ ಶಿಷ್ಯಪ್ರೀತಿಯನುೞಿದು ತನಗೆ ತಕ್ಕುದೆನಿಪುದನೆಸಕಮನೆಸಗಲಾರಂಭಿಸಿಪ್ಪರ್ಂ; ಇದಿಂತೆ ದಲ್—

ಮಿಗೆ ದುರ್ಯೋಧನಪಕ್ಷಪಾತಕುಚಿತಂ ತಾನಾವುದಂತಾವುದೊ |
ಪೃಗುಪುಸ್ತ್ರಗ್ರಹಣಕ್ಕದಾವುದನುರೂಪಂ ರಾಮನಿಂ ಕೊಂಡ ಕೈ ||
ದುಗಳಿಂ ಪೆರ್ಚಿದ ಬೀರಕಾವುದು ಧನುರ್ಧಾರೀಂದ್ರನಾಕ್ರೋಧಕೊ |
ಪೃಗುವಾರಂಭಿಸಿದಂ ದಲಂತಹುದನೆನ್ನಯ್ಯಂ ರಿಪುಧ್ವಂಸಕಂ ||೬೦||

(ಪಿಂತೆ ನೋಡಿ) ಈಗಳಿನ್ನುಂ ರಥದ ನಿರೀಕ್ಷಣೆಯೇಕೆ? ನೀರ್ದೀವಿದ ಮುಗಿಲಂತೆ ಕರ್ವೆಳಗಿನಿಂ ಕಣ್ಗೊಳುತ್ತೆ ಪಿಡಿತಕೆ ಪವಣೆನಿಪ ಮಿಸುಪ ಮಿಸುನಿಯ ಪಿಡಿಯ ಕಡುಗದಿನಿದಱಿನಾಂ ಸಶಸ್ತ್ರನೆಂ. ರಣರಂಗಮನೆಯ್ದುವೆಂ. (ಕಿಱಿದಾದೂರಂ ನಡೆದು, ಎಡಗಣ್ಣದಿರ್ವುದಂ ಸೂಚಿಸಿ) ಆಃ! ಇದೇಂ? ರಣಮಹೋತ್ಸವಪರಿತೋಷದಿಂ ಪರಿಪೂರ್ಣನಾದ ತಾತನ ಪರಾಕ್ರಮಮಂ ನೋಡಲ್ ತವಕಿಸುತಿರ್ಪ್ಪಶ್ವತ್ಥಾಮಂಗೆನಗಂ ಸಮರಭೂಮಿಯನೆಯ್ದಲ್ ಅಪಶಕುನಂಗಳೆಡಱನೊಡರಿಕುಂ. ಇರ್ಕೆ; ಎಯ್ದುವೆಂ (ಎಂದು ದರ್ಪದಿಂ ಪೊಱಮಟ್ಟು, ಮುಂದೆ ನೋಡಿ) ಇದೇಂ? ಕ್ಷತ್ರಧರ್ಮಮನವಗಣಿಸಿ ವೀರಪುರುಷರ್ಗೆ ತಕ್ಕ ನಾಣೆಂಬ ಮುಸುಕನುಱಿದು, ಸ್ವಾಮಿಭಕ್ತಿಯುಮಂ ಸ್ವಾಮಿಗೈದ ಸತ್ಕಾರಮುಮಂ ಮಱೆತು ಕೀೞೆರ್ದೆಯರಾಗಿ ತಮ್ಮ ಕುಲಕಂ ಬಲಕಂ ತಕ್ಕುದೆನಿಪುದ ನಾರ್ಪಂ ಲಕ್ಕಿಸದೆ, ತಮಗಿರತಕ್ಕುದಂ ಧೈರ್ಯಮನಱಿಯದೆ, ಸಮರಾಂಗಣದತ್ತಣಿಂ ಪೆಡಮಗುೞ್ದೈತರುತಿರ್ಪ ಪಡೆಯಿಲರ ಕೋಲಾಹಲಂ. (ಸಮಂತವಲೋಕಿಸಿ) ಅಹಹ! ಛಿಃ ಕಷ್ಟಂ ಕಷ್ಟಂ!! ಕರ್ಣಾದಿಗಳೀ ಮಾರಥಿಕರ್ ಸಮರಾಂಗಣದತ್ತಣಿಂ ಪೆಡಮಗುಱುತಿರ್ದಪರ್. ತಾತನೊಡೆಯನಾಗಿರಲೊಡಂ ಮೆಱೆವೀಪಡೆಗಳ್ಗೆ ಅದೆಂತೀಯವತೆ? ಅಕ್ಕೆ; ಇಂತು ಪೇೞ್ದಪೆಂ—

ಎಲೆಎಲೆ ಕೌರವರ ಪಡೆಯೆಂಬ ಕಡಲಂ ದಡಂ ಮೀಱದಂತೆ ತಡೆದು ಕಾಪಿಡುವುದಱೊಳ್ ಪೆರ್ವೆಟ್ಟುಗಳೆನಿಪ ರಾಯರಿರಾ! ಧುರಮುಱಿವ ನಿಮ್ಮ ಸಾಸಂ ಸಾಲ್ಗುಂ ಸಾಲ್ಗುಂ.

ಧುರವ್ರಟಿ ವ್ರದಱಿಂ ಮೃತಿಭಯು |
ಮಿರದೊಡೆ ಪೆಱಸಾವ್ರುದುಚಿತಮಿತ್ತಣಿನೆಂತುಂ ||
ಮರಣಂ ಶರೀರಿಗುಂಟಿಂ |
ದಱಿವೊಡೆ ನೀಂ ಬಱಿದೆ ಜಸಕೆ ಕಱೆಯುಸಗದಿರಿಂ ||೬೧||

ಅಲ್ಲದೆ—

ಘನಶಸ್ತ್ರಜ್ವಾಲೆಯೆತ್ತಂ ಬಳಸಿರೆ ರಿಪುಸೇನಾಬ್ಧಿಗೌರ್ವಾನಲಂ ಮೇಣ್ | ಧನುವಂ ತಾಳ್ದಿಲ್ಲರೋಜಂ ಪಡೆಗಧಿಪತಿಯಾಗೊಪ್ಪಿರಲ್ ನನ್ನ ತಾತಂ || ಇನಿತೇಂ ಕರ್ಣಾ ಬಿಗುರ್ ಯುದ್ಧಕೆ ನಡೆ ಕೃಪ ಹಾರ್ದಿಕ್ಯ ಪಾರ್ಥ್ ಭೀತಿಯುಂ ಮು | ಜ್ಜನಕಂ ಬಿಲ್ಗೊಂಡು ಭಾರಂದಳೆದಿರೆ ರಣದೊಳ್ ಭೀತಿಗಿಂತೇಂ ನಿಮಿತ್ತಂ ||೬೨||

(ಆಗಸದಲ್ಲಿ) ಇನ್ನುಂ ನಿನ್ನ ಜನಕನೇ?

**ಅಶ್ವತ್ಥಾಮಂ**—(ಆಲಿಸಿ) ಏನೇಟ್ಟಪಿರ್? "ಇನ್ನುಂ ನಿನ್ನ ಜನಕನೇ" ಎಂದೋ? ಆಃ! ಎಲೆಎಲೆ ರಣಭೀರುಗಳೆನಿಪ ಪಂದೆಗಳಿರಾ! ಇಂತು ಜಱುಚುವ ನಿಮ್ಮನಾಲಗೆಯಿದು ಸಹಸ್ರಭಾಗವಾಗೆ ಅದೇಕೆ ಸೀಳ್ದುಪೋಯ್ತಿಲ್ಲ?

ಜ್ವಲಿಸುತ್ತುಂ ಜಗಮುಂ ಸುಡಲ್ಕುದಯಿಸಿಲ್ಲಂ ದ್ವಾದಶಾದಿತ್ಯರೆ |
ತ್ತಲುಮೇಟುಂತೆಱನುಳ್ಳವೇಟುಮೊಲರ್ಗಳ್ ತೀಡಿಲ್ಲ ಮತ್ತಂ ನಭ ||
ಸ್ತಲಮುಂ ಬಾಸಣಿಸಿಲ್ಲ ಪುಷ್ಕರಮುಖಾಂಭೋದಂಗಳುಂ ಪೇಟ್ವರೆಂ |
ತೆಲೆಪಾಪಾತ್ಮರೆ ಶೌರ್ಯರಾಶಿಯೆನಿಪೆಮ್ಮಯ್ಯಂಗೆ ನೀಂ ಪೊಲ್ಲದಂ ||೬೩||

(ಬಟಿಕೆ ಪ್ರಹಾರಂದಳೆದ ಸೂತಂ ಸಂಭ್ರಾಂತನಾಗಿ ಪ್ರವೇಶಿಪಂ)

**ಸೂತಂ**—ಕುಮಾರಂ ರಕ್ಷಿಕೆ ರಕ್ಷಿಕೆ.

(ಎಂದು ಕಾಲ್ಗಳ ಮೇಲೆ ಬೀಟ್ವಂ)

**ಅಶ್ವತ್ಥಾಮಂ**—(ನೋಡಿ) ಆಃ! ಇದೇಂ? ತಾತಸಾರಥಿಯಶ್ವಸೇನಂ. ಆರ್ಯ! ಮೂಲೋಕಂಗಳಂ ರಕ್ಷಿಸಲಾರ್ಪ ಮಜ್ಜನಕನ ಸಾರಥಿಯೆನಿಸಿರ್ದಪೆ. ಆದೊಡಮದೇಂ ಪೆಱನತ್ತಣಿಂ ಕಾಪನಪೇಕ್ಷಿಪಯ್?

**ಸೂತಂ**—(ದುಗುಡದಿಂ) ಇನ್ನುಂ ನಿನ್ನ ಜನಕನೇ?

**ಅಶ್ವತ್ಥಾಮಂ**—ಏಂ ಜನಕನೆ ಇರನೆ? ಹಾ ಜನಕ!

(ಎಂದು ಮುಚ್ಚೆವೋಪಂ)

**ಸೂತಂ**—ಕುಮಾರ! ಸಮಾಹಿತಚಿತ್ತನಾಗು: ಸಮಾಹಿತಚಿತ್ತನಾಗು.

**ಅಶ್ವತ್ಥಾಮಂ**—(ಎಚ್ಚತ್ತು ಕಣ್ಣೀರಿಡುತ್ತೆ) ಹಾ ತಾತ! ಹಾ ಪುತ್ರವತ್ಸಲ! ಹಾ ತ್ರೈಲೋಕ್ಯಧನುರ್ಧರ! ಹಾ ಪರಶುರಾಮನಸ್ತ್ರ ಸರ್ವಸ್ವಮುಮನಟ್ಕಱಿಂ ಕೈಕೊಂಡವನೆ!

**ಸೂತಂ**—ಸಾಲ್ಗುಂ ಸಾಲ್ಗುಮಾಯುಷ್ಮಂತನೆ! ಈಪೇರಱಿಲಿನೇಂ? ತಾತಂ ಬೀರಗುರ್ಚಿತಮಪ್ಪಿರವಂ ಪಡೆದಿರ್ಪನಂ ನೀನುಮದರ್ಕೆ ತಕ್ಕ ಬೀರದಿಂ ದುಗುಡಗಡಲಂ ದಾಂಟಿ ಪದುಳವಿರು.

**ಅಶ್ವತ್ಥಾಮಂ**—(ಕಣ್ಬನಿಯಿಟ್ಟು) ಆರ್ಯ! ನುಡಿನುಡಿ. ಅಂತಪ್ಪ ತೋಳ್ವಲ್ಮೆಯುಮಂ ಕಡಲಂತಪಾರಮಾದ ಅಂತಪ್ಪಸ್ತ್ರಪ್ರಭಾವಮುಮಂ ಪಡೆದ ತಾತನುಮದೆಂತು ಅೞಿದಂ?

ಗುರುಗದಭೀಮನಿಂದೆ ಗುರುದಕ್ಷಿಣೆಗೊಂಡನೊ ಭೀಮಸುಪ್ರಿಯಂ |

**ಸೂತಂ**—ಕುಮಾರ! ಇಂತಲ್ತು. ಶಾಂತಂ ಪಾಪಂ ಶಾಂತಂ ಪಾಪಂ.

**ಅಶ್ವತ್ಥಾಮಂ**—

ನರನಿನದೇಂ ವಿಮುಕ್ತನಯನಿಂ ಹತನಾದನೊ ಶಿಷ್ಯವತ್ಸಳಂ ||

**ಸೂತಂ**—ಇದೆಂತು ಸಂಭವಿಕುಂ?

**ಅಶ್ವತ್ಥಾಮಂ**—

ಮುರರಿಪು ಲಕ್ಷ್ಯವಾಗಿಸಿದನೋ ಶಿತಚಕ್ರದ ಧಾರೆಗಾತನಂ |

**ಸೂತಂ**—ವತ್ಸ! ಇದುವುಮಲ್ತು.

**ಅಶ್ವತ್ಥಾಮಂ**—

ಗುರುಗಿವರಿಂದೆ ನಾಲ್ಕನೆಯನಿಂ ಪೆಱನಿಂದೆಣಿಸೆಂ ವಿಪತ್ತಿಯಂ ||೬೪||

**ಸೂತಂ**—ನೋಡು—

ಕರದೊಳ್ ತಾಳ್ದು ಮಹಾಸ್ತ್ರಮಂ ಹರನವೋಲ್ ಸಂಗ್ರಾಮದೊಳ್ ಕ್ರೋಧಮಾಂ | ತಿರಲಾತಂಗೆ ಸಮಾನರಾದಪರೆ ತಾಂ ನೀಂ ಪೇಟ್ದವರ್ ಮೂವರುಂ || ಪಿರಿದುಂ ಮಾನಸಮಂ ನಿರೋಧಿಸಿದ ಶೋಕೋದ್ರೇಕದಿಂ ಶಸ್ತ್ರಮಂ | ತೊಱೆದಿರ್ಪ್ಪಂದೆಡೆಗೆಯ್ದಿ ವೈರಿಯಕಟಾ ಗೈದಂ ಮಹಾಘೋರಮಂ ||೬೫||

**ಅಶ್ವತ್ಥಾಮಂ**—ಆದೊಡೆ ಶೋಕೋದ್ರೇಕಕೆ ಮೇಣ್ ಅಸ್ತ್ರಪರಿತ್ಯಾಗಕ್ಕೆ ನಿಮಿತ್ತಮೇಂ?

**ಸೂತಂ**—ಎಲೈ! ಕುಮಾರನೇ ನಿಮಿತ್ತಂ.

**ಅಶ್ವತ್ಥಾಮಂ**—ಅದೆಂತು ನಾಂ?

**ಸೂತಂ**—(ಕಣ್ಬನಿಗಱೆದು) ಕೇಳ್—

## || ಪಿರಿಯಕ್ಕರಂ ||

ಪುಸಿಯನಾಡದ ಧರ್ಮಜನಶ್ವತ್ಥಾಮಾ ಹತಃ ಎಂದತಿಸ್ಪಷ್ಟಮಪ್ಪಂ | ತುಸಿದುರ್ ಕಡೆಯಲ್ಲಿ ಕುಂಠಿತಧ್ವನಿಯಿಂದವಂ ಗಜವೆಂದು ನುಡಿದಂ ಗಡಾ || ವಸುಧೆಯಾಣ್ಮನಾನುಡಿಯಂ ಕೇಳ್ದವನಲ್ಲಿ ನಂಬುಗೆಯಿಂದೀತಂ ಸುತವತ್ಸಲಂ | ವ್ಯಸನಮೊಂದಿ ಸಂಗ್ರಾಮದಲ್ಲಸ್ತ್ರವನಶ್ರುವಂ ಬಿಟ್ಟನೊರ್ಮೊದಲೊಳ್ ||೬೬||

**ಅಶ್ವತ್ಥಾಮಂ**—ಹಾ ತಾತ! ಹಾ ಸುತಪ್ರಿಯ! ಹಾ ಎನಗಾಗೆ ನಿರರ್ಥಂ ಜೀವವ್ರುಟಿದಾತನೆ! ಹಾ ಶೌರ್ಯರಾಶಿಯೆ! ಹಾ ಶಿಷ್ಯಪ್ರಿಯನೆ! ಹಾ ಯುಧಿಷ್ಠಿರಪಕ್ಷಪಾತಿಯೆ! (ಎಂದು ರೋದಿಪಂ)

**ಸೂತಂ**—ಕುಮಾರ! ಸಾಲ್ಗುಂ; ಬಱಿದೆ ಪಿರಿದುಂ ರೋದಿಪಪಂಬಲಿನೇಂ?

**ಅಶ್ವತ್ಥಾಮಂ—**

ಸುತವಾತ್ಸಲ್ಯದೆ ಕೂಡಿದಂ ಪುಸಿಯು ಸಾವಂ ತಾತ ಕೇಳ್ದನ್ನದಂ |
ಧೃತಬಾಣಂಗಳನಂತು ನೀನೊಡನೆಯೇ ಪ್ರಾಣಂಗಳಂ ನೀಗಿದೈ ||
ಮೃತಿಯಂ ನೀಂ ಪಡೆದಿರ್ದೊಡಂ ದಿಟದೆ ಕೇಳ್ದಂ ಜೀವಿಪೆಂ ನಿನ್ನಗ |
ಲ್ದತಿಸಂಪ್ರೀತಿ ನಿನತ್ತು ಕಲ್ಲೆರ್ದೆಯನಾದೆನ್ನೊಳ್ ನಿರರ್ಥಂ ಗಡಾ ||

(ಎಂದು ಮೂರ್ಛೆಗೊಳ್ವಂ)

**ಸೂತಂ—** ಕುಮಾರ! ಸಮಾಧಾನಂಗೊಳ್ ಸಮಾಧಾನಂಗೊಳ್.

(ಬಟಿಕೆ ವ್ಯಾಕುಲಂ **ಕೃಪಂ** ಪುಗುವಂ)

**ಕೃಪಂ—**

ಜನಪಾಲಾಸ್ಥಾನದೊಳ್ ಮುಂ ದ್ರುಪದಸುತೆಯ ಮೋಣಿಂದು ಸಂಗ್ರಾಮದೊಳ್ ದ್ರೋ | ಣನ ಕೇಶಾಕರ್ಷಮಂ ಚಿತ್ರದೆ ಲಿಖಿತರ ವೋಲ್ ನೋಡುತಾರಿರ್ದರೋ ತಾಂ || ಅನುಜಾತೋಪೇತನಂ ಚೀಃ ಕುರುಪನನವನಂ ಚೀಃ ಅಜಾತಾರಿಯಂ ಸು | ಮ್ಮನೆ ಕೈದಾಂತಿರ್ಪರಂ ಚೀಃ ಕ್ಷಿತಿಪರನವರಂ ಚೀಃ ಎನಲ್ವೇಟ್ಕುಮೆಮ್ಮಂ ||೭೮||

ಆದೊಡೆ ವತ್ಸನನಶ್ವತ್ಥಾಮನನಾನದೆಂತು ನೋಟಿಪ್ಪೆಂ? ಒಂದು ಪಕ್ಷದೊಳ್ ಧೈರ್ಯದಿಂ ಹಿಮವತ್ಪರ್ವತಂಬೊಲ್ ಅಚಲಿತಮಾದ ಮಹಾಹೃದಯಮುಳ್ಳನೆನಿಸಿ ಲೋಕಸ್ಥಿತಿಯನಱತನಶ್ವತ್ಥಾಮನವಂ ಅನಿತ್ತದವಟಲ್ಗೆಡೆಯಾಗನೆಂದೂಹಿಪೆಂ ; ಪೆಱತೇನೆನೆ, ತಗದ ಪಿತೃವಿನೇಳಿದಮಂ ಕೇಳ್ದು ತಾನದೇಂಗೆಯವೇಟ್ಪುದೆಂದು ತಱುಸಂದಿರ್ಪನೋ ಅಱಯೆಂ. ಒಂದುಪಕ್ಷದೊಳ್—

ಪರಿಪಾಕಮದೊಂದಱದೇ |
ಧರಣೀತಲದಲ್ಲಿ ಘೋರಮೆನಿಸಿರ್ಕ್ಕುಂ ಮ ||
ತ್ತೆರಡನೆಯ ಕಚಗ್ರಹಮೊದ |
ವಿರಲಿದು ನಿಶ್ಶೇಷಮೋ ವಲಂ ಪ್ರಜೆಯೆಲ್ಲಂ ||೭೯||

(ನೋಡಿ) ಇದೆ ವತ್ಸನಿತ್ತಲೆ ಇರ್ದ್ದಪಂ. ಬಟಿಸಾರ್ದಪೆಂ. ಎಂದು ಬಟಿಸಾರ್ದು ಸಂಭ್ರಾಂತನಾಗಿ) ವತ್ಸ! ಸಮಾಧಾನವೊಂದು, ಸಮಾಧಾನವೊಂದು.

**ಅಶ್ವತ್ಥಾಮಂ**—(ಎಚ್ಚತ್ತು ಕಣ್ಣೀರಿಡುತ್ತೆ) ಹಾ ತಾತನೆ! ಸಕಲ ಲೋಕೈಕಗುರುವೆ! (ಮೇಲೆ ನೋಡಿ) ಯುಧಿಷ್ಠಿರ! ಯುಧಿಷ್ಠಿರ!!

ಜನಿ ಮೊದಲಾಗೆ ನೀಂ ಪುಸಿಯನಾಡಿದುದಿಲ್ಲಮದೆಂದುಮಾರೊಳಂ |
ನಿನಗಿರದಲ್ತೆ ವೈರಮದುಕಾರಣದಿಂದಮಜಾತಶತ್ರು ನೀಂ ||
ಜನಕನೊಳೋಜನೊಳ್ ದ್ವಿಜವರೇಣ್ಯನೊಳೆನ್ನಯ ಭಾಗ್ಯದೋಷದಿಂ |
ಜನಪನೆಯೆಂತುಟೇಕಪದದಲ್ಲಿಯೆ ನಾಶಿತಮಾಯ್ತುದೆಲ್ಲಮುಂ ||೨೦||

**ಸೂತಂ**—ಕುಮಾರ! ಇದೆ ನಿಮ್ಮ ಮಾತುಳಂ ಕೃಪಂ ಪಕ್ಕದೊಳ್ ನಿಂದಿರ್ದ್ದಪಂ.

**ಅಶ್ವತ್ಥಾಮಂ**—(ಪಕ್ಕದೊಳ್ ನೋಡಿ, ಕಣ್ಣೀರಿಡುತ್ತೆ) ಮಾವ! ಮಾವ!

ಅನುವರಕಿಂದದಾವಬಲನಾಯಕನಿಂದೊಡಗೂಡಿ ಪೋದೆ ನೀಂ |
ಘನರಣಕಂಡುವಂ ಕಳೆವನಾವನದೊರ್ವ್ವನೆ ವಿಕ್ರಮಾಢ್ಯರಾ ||
ಬಿನದಿಸುತಿರ್ದ್ದ ನೀಂ ವಿವಿಧಮಂ ಪರಿಹಾಸಮನಾಡಿ ನಿಚ್ಚಮಾ |
ವನೊಳೆಲೆಮಾವ ನಿನ್ನನುಜೆಯಾಣ್ಮನವಂ ಘನನೆತ್ತಲೆಯ್ದಿದಂ ||೨೧||

**ಕೃಪಂ**—ವತ್ಸ! ನೀನಱುವುದನಱುತಿರ್ಪ್ಪನಯ್. ಅದಱುಂ ಸಾಲ್ಗುಂ; ಅತ್ಯಂತಶೋಕಾವೇಗದಿಂ ಫಲಮೇಂ?

**ಅಶ್ವತ್ಥಾಮಂ**—ಮಾವ! ಶೋಕಿಪುದಂ ಬಿಟ್ಟೆನೆವಲಂ. ಇದೆ ನಾಂ ಪುತ್ರವತ್ಸಳನಂ ಪಿತೃವನೆ ಬೆಂಗೊಂಡಪೆಂ.

**ಕೃಪಂ**—ವತ್ಸ! ಇಂತಪ್ಪುದು ನಿಮ್ಮಂತಪ್ಪರ್ಗ್ಗೆ ತಗದು.

**ಸೂತಂ**—ಕುಮಾರ! ಅತಿಸಾಹಸಂ ಸಾಲ್ಗುಂ.

**ಅಶ್ವತ್ಥಾಮಂ**—ಆರ್ಯ! ಏನೆಂದಪೆ?

ತಾತಂ ನನ್ನ ವಿಯೋಗದ |
ಭೀತಿಯಿನಿರದಿತ್ತಣಿಂ ಪರತ್ರಕೆ ಪೋದಂ ||
ಜಾತನೊಳತಿವತ್ಸಳನೆನಿ |
ಪಾತಂಗಾನೀಗಳೆಂತು ವಿರಹಂಗೈವೆಂ ||೭೨||

**ಕೃಪಂ**—ವತ್ಸ! ಈಸಂಸಾರಮಿರ್ಪನ್ನಂ ಪುತ್ರರಿಹದೊಳಂ ಪರದೊಳಂ ಪಿತೃಗಳನನುವರ್ತಿಸಿ ನಡೆಯುವೇಟ್ಕುಮೆಂಬ ಲೋಕದ ನಡೆಯಿದು ಸುಪ್ರಸಿದ್ಧಮೆಗಡಾ? ನೋಡು—

ಉದಕಾಂಜಲಿಯಿಂ ಧರ್ಮದ |
ಸದನಂಗಳಿನಂತು ಶ್ರಾದ್ಧಕರ್ಮದೆ ಪರಲೋ ||
ಕದ ಸೌಖ್ಯಮನಾತಂಗೀ |
ವುದರ್ಕೆ ನೀಂ ನೆಱೆವುದಿದ್ರ್ದ ಅಂತಲ್ಲದೆಯೋ ||೭೩||

**ಸೂತಂ**—ಆಯುಷ್ಮಂತನೆ! ಶಾರದ್ವತಂ ಪೇಳ್ದಂತೆ ವಲಂ.

**ಅಶ್ವತ್ಥಾಮಂ**—ಆರ್ಯ! ಇದೆಲ್ಲಮಿಂತು. ಪೆಱತೇನೆನೆ, ಕಟ್ಟಲ್ ಸಹಿಸಲಸದಳಮಾದುದಱಿಂ ತಾತನನಗಲ್ದು ಒಚ್ಚಣಮುಂ ಹರಣಂಗಳಂ ತಾಳಲಾಱೆಂ; ಅದಱಿನಂತಪ್ಪವತೆಗಡಪ್ಪಾದನನೆನ್ನತಂದೆಯ ನೆತ್ತಸೋಡಲಕ್ಕುಮೋ ಅತ್ತಲಿ ನಾನೆಯ್ದುವೆಂ. (ಎಂದೇಱುತ್ತುಂ ಕಡುಗಮಂ ನೋಡಿ, ಚಿಂತಿಸಿ) ಈಗಳುಂ ಕೈದುವಿಡಿವ ವಿಡಂಬನದಿನೇಂ? ಎಲೆಪೂಜ್ಯ ಶಸ್ತ್ರಮೆ!

ಪರಿಭವಕಂಜಿ ನಿನ್ನ ಪಿಡಿದಿರ್ದನದಾವನನರ್ಹಮಾದೊಡಂ |
ಧರೆಯೊಳಲಕ್ಷ್ಯಮೊಂದುಮಿರದೋ ನಿನಗಾವನದೊಂದುಶಕ್ತಿಯಿಂ |
ಉರುಸುತಶೋಕದಿಂದುೞಿದನಾಗುರು ನಿನ್ನನಧೈರ್ಯದಿಂದಮು |
ಲ್ತೆಱಗುತೆ ನಿನ್ನನಾನುಮುೞಿದೇನಿದಱಿಂ ನಿನಗಕ್ಕೆ ಮಂಗಳಂ ||೭೪||
(ಎಂದುೞಿಯಲಾಟಿಪಂ).

(ನೇಪಥ್ಯದೊಳ್) ಎಲೆಎಲೆ ರಾಯರಿರಾ ! ಪೂಜ್ಯನುಂ ಗುರುವುಮಾದ ಭಾರದ್ವಾಜಂಗೆ ಈಯಱುಗುಲಿ ಗೆಯ್ದು ಸಲ್ಲದೇಳಿದಮನದೆಂತು ನೀವೆಲ್ಲರುಮುಪೇಕ್ಷಿಪಿರ್ ?

**ಅಶ್ವತ್ಥಾಮಂ**—(ಆಲಿಸಿ, ಮೆಲ್ಲನೆ ಶಸ್ತ್ರಮಂ ಸೋಂಕುತೆ) ಏಂ ಎನ್ನ ತಂದೆ ಭಾರದ್ವಾಜಂಗಮೇಳಿದಮೋ ?

(ಮತ್ತೆ ನೇಪಥ್ಯದೊಳ್)

ಧನುರಾಚಾರ್ಯಂ ತ್ರಿಲೋಕೀಗುರು ಕಲಶಭವಂ ಜುದ್ದದೊಳ್
ಶೋಕದಿಂದಾ | ನನಮಂ ಕಣ್ಣೀರ್ಗಳಿಂದಂ ಮಿಗೆ ನನೆಯಿಸುತುಂ
ಕೈದುವಂ ನೀಗಿರಲ್ ಭೋಂ || ಕನೆ ಧೃಷ್ಟದ್ಯುಮ್ನನೆಯ್ತಂದಕಟ
ನರೆತ ತನ್ಮೌಳಿಯಲ್ಲಿಟ್ಟು ತಾಂ ಕೈ | ಯನವಂ ಕೂರ್ಗೆಯ್ತುಮಂ
ಗೈದೊಡನೆಯೆ ಸಿವಿರಂಬೊಕ್ಕಪಂ ಸೈಸಿಮೆಲ್ಲರಾ ||೭೫||

**ಅಶ್ವತ್ಥಾಮಂ**—(ಕೋಪದಿಂ ಕಂಪಿಸುತ್ತೆ, ಕೃಪಸೂತರಂ ನೋಡಿ) ಇದೇಂ ?

ಕರದೊಳ್ ತಾಳ್ದಿರ್ದ ಕೈದಂ ಪರಿಹರಿಸಿ ಮುಗುಳ್ಮಾಡಿ ನೇತ್ರಂ
ಗಳಂ ನಿ | ರ್ಭರದಿಂ ಪ್ರಾಯೋಪವೇಶವ್ರತಕೆ ಸದೃಶಮಾಗಿರ್ಪುದಂ
ಶಾಂತಿಯಂ ಸ್ವಾಂ || ತರದೊಳ್ ಕೈಕೊಂಡ ನಮ್ಮಯ್ಯನ ನರೆತ
ಶಿರೋದೇಶದೊಳ್ ಕೈದನಾಂತಿ | ರ್ಪರಸರ್ ಕಣ್ಣಾಱೆ ನೋಡುತ್ತಿರ
ಲೊಡಮವನಿಂದಾಯ್ತೆ ಶಸ್ತ್ರಪ್ರಯೋಗಂ ||೭೬||

**ಕೃಪಂ**—ವತ್ಸ ! ಇಂತು ಜನಮೆಂಗುಂ.

**ಅಶ್ವತ್ಥಾಮಂ**—ಏಂ ದುರಾತ್ಮಂ ತಾತನ ಸಿರಮಂ ಸೋಂಕಿದನೇ ?

**ಸೂತಂ**—(ಭಯಂಗೊಂಡು) ಕುಮಾರ ! ತೇಜೋರಾಶಿಗಾದೇವಂಗೆ ಇದೊಂದು ಪೊಸತಪ್ಪೇಳಿದಮೊದವಿದತ್ತು.

**ಅಶ್ವತ್ಥಾಮಂ**—ಹಾ ತಾತ! ಹಾ ಪುತ್ರಪ್ರಿಯ! ನಿರ್ಭಾಗ್ಯನೆನ್ನ ನಿಮಿತ್ತದಿಂ ಶಸ್ತ್ರಮನುಱುದು ನೀನಂತಪ್ಪ ಕೀಟತ್ತಣಿಂದೊಡಲನೇಳಿದಂಗೊಳಿಸಿದೆ. ಒಂದುಪಕ್ಷದೊಳ್—

ಧುರದೊಳ್ ದುಃಖದಿನಂಧವಾದ ಮನದಿಂ ನೀನಸ್ತ್ರಮಂ ನೀಗಿರಲ್ | ಸಿರಮಂ ಸೋಂಕುಗೆ ನಾಯೊ ವಾಯಸವೊ ಮೇಣ್ ಪಾಂಚಾಲಸಂಜಾತನೋ || ಸ್ಫುರದಸ್ತ್ರೌಘಧನರ್ಧ್ದಿಯಿಂ ಮುದಿಸಿದಾಪ್ರತ್ಯರ್ಥಿಯಾ ಮುಂಡೆಯೊಳ್ | ಭರದಿಂದೆನ್ನಯ ವಾಮಪಾದವನೆ ನಾನಿಟ್ಟೀನಿಡೆಂ ಪಾಣಿಯಂ ||೭೭||

ಆಃ! ದುರಾತ್ಮ! ಪಾಂಚಾಲಾಧಮ!

ಗುರುವಿನ್ನೆಂತುಟುಮಸ್ತ್ರಮಂ ಪಿಡಿವನಲ್ತೆಂಬರ್ಥಮಂ ಚಿತ್ತದೊಳ್ | ತಱಿಸಂದಳ್ಕದೆ ತಚ್ಛಿರಸ್ತಟದೆ ಕೈಯಿಟ್ಟಂದು ನಿನ್ನಾತ್ಮದೊಳ್ || ಕರದೊಳ್ ಚಾಪಮನಾಂತು ಪಾಂಡವರ ಮೇಣ್ ಪಾಂಚಾಲನಾ ಸೈನ್ಯಮಂ | ಬುರುಕಾಪರ್ಾಸಕೆ ಕಲ್ಪವಾಯುವೆನಿಪಶ್ವತ್ಥಾಮನೇಂ ಬಾರನೇ ||೭೮||

ಯುಧಿಷ್ಠಿರ ಯುಧಿಷ್ಠಿರಾ! ಅಜಾತಶತ್ರು! ಅಮೃಷಾವಾದಿಯೆ! ಧರ್ಮಪುತ್ರಾ! ನಿನಗೊ ನಿನ್ನೊಡವುಟ್ಟಿದರ್ಗೋ ಈತನೇನಪಕೃತಿಯಂ ಗೈದಂ? ಒಂದುಪಕ್ಷದೊಳ್ ಅಸತ್ಯಸ್ವಭಾವದಿಂ ಕೊಂಕೆರ್ದೆಯನಾದಿವನಿಂದೇಂ? ಅರ್ಜುನ! ಅರ್ಜುನ! ಸಾತ್ಯಕೀ! ಸಾತ್ಯಕೀ! ಭುಜಶಾಲಿ ವೃಕೋದರ ವೃಕೋದರ! ಕೃಷ್ಣ ಕೃಷ್ಣ!! ತ್ರೈಲೋಕ್ಯೈಕಧನುರ್ಧರನುಂ ಪಾರ್ವನುಂ ಮುತ್ತನುಂ ಸರ್ವರಾಚಾರ್ಯನುಂ ಆಗಿ, ಅದಱೊಳಂ ಎನ್ನ ಜನಕನೆನಿಸಿದ ಈತನ ಉತ್ತಮಾಂಗಮಂ ದ್ರುಪದಕುಲಕಳಂಕಭೂತನೀನರಪಶು ಸೋಂಕುತಿರ್ದೊಡೆ ನೀಮೆಲ್ಲರುಂ ಮಿಟಮಿಟನೆ ನೋಡುತೆ ಕೆಮ್ಮನಿರ್ದುದು ತಗುಗುಮೇ?

ಒಂದುಪಕ್ಷದೊಳ್ ಇವರೆಲ್ಲರುಂ ಮಹಾಪಾಪಿಗಳ್. ಇವರಿಂದಾಗ ವೇಟ್ಟುದೇಂ ?

ಕರದೊಳ್ ಕೈದಾಂತವರ್ ಮಾನುಷಪಶುಗಳದಾರೀಮಹಾ
ಪಾಪಮಂ ಗೆ | ಯ್ದರೊ ಮೇಣಾರ್ ಕಂಡಿರೋ ಮೇಣನುಮತಿಸಿದಿರೋ
ವಿಗಾಱ ಪುರ್ವ್ಯಾದೆಯೊಳ್ಪಂ || ಹರಿಯಿಂದಂ ಭೀಮನಿಂದಂ ಸುರಪತಿಸುತ
ನಿಂದಂ ನೆರಂಗೊಂಡ ನಿಮ್ಮೆ | ಲ್ಲರ ಮೇದೋರಕ್ತಮಾಂಸಪ್ರಕರದೆ
ಬಲಿಯುಂ ದಿಕ್ಕುಗಳ್ಗಿಕ್ಕುವೆಂ ನಾಂ ||೭೯||

**ಕೃಪಂ**—ವತ್ಸ! ಭುಜಬಲಶಾಲಿಯುಂ ದಿವ್ಯಾಸ್ತ್ರಜಾಲಕೋವಿದನುಂ ಆಗಿ ದ್ರೋಣಾಚಾರ್ಯಂಗೆಣೆಯೆನಿಸಿದ ನಿನ್ನಲ್ಲಿ ಅದಾವುದುಮಸಂಭಾವ್ಯಮಲ್ತು.

**ಅಶ್ವತ್ಥಾಮಂ**—ಎಲೆ ಎಲೆ ಪಾಂಡವವಿರಾಟದ್ರುಪದಜಯದ್ರಥಾದಿಕ್ಷತ್ರಿಯಾಧಮರಿರಾ !

ಘನವಹ್ನಿಜ್ವಲಿತಾಂಶುವಂ ಪರಶುವಂ ಕೈಕೊಂಡ ರಾಮಂ
ಸ್ವತಾ | ತನ ಶೀರ್ಷಂ ಪರಿಮೃಷ್ಟಮಾಗೆ ನೆಗಟ್ದಂ ಮುನ್ನಾವುದಂ
ಕೇಳಿರೇಂ || ಮೊನೆಯೊಳ್ ಬೀಟ್ವರಿರಕ್ತಧಾರೆ ಪಿತೃಭುಕ್ತೋತ್ಸೃಷ್ಟ
ಮಪ್ಪಂತೆ ಚಂ | ಡನಿವಂ ಕಜ್ಜಮನಿಂದದಂ ನೆಗಟಲಶ್ವತ್ಥಾಮನೇಂ
ಸಾಲನೇ ||೮೦||

ಸೂತ ! ಪೋಗು ; ಮಹಾಹವಲಕ್ಷಣಮೆಂಬೆಮ್ಮ ಸಾಂಗ್ರಾಮಿಕರಥಮಂ ಸಜ್ಜುಗೆಯ್ದುತಾರ.

**ಸೂತಂ**—ಕುಮಾರನಾದೇಶಿಸಿದಂತೆ. (ಎಂದು ಪೋಪಂ.)

**ಕೃಪಂ**—ವತ್ಸ ! ಎಂತುಂ ಪಡಿಗೆಯುಲೆವೇಟ್ಟ ಕ್ರೂರಮಾದೀತಿರಸ್ಕಾರಮೆಂಬ ಕಿಚ್ಚಿನೊಳ್ ಸಿಲ್ಕಿದರ್ಗೆ ಎಮಗೆಲ್ಲರ್ಗಂ ನೀನಲ್ಲದೆ ಪ್ರತಿಕ್ರಿಯೆಗೆಯ್ಯಲ್ ನೆಱುವಂ ಪೆಱನಾವೊಂ ?

**ಅಶ್ವತ್ಥಾಮಂ**—ಇಂ ಒಱೆಯುವೋಂ?

**ಕೃಪಂ**—ಸೈನ್ಯಾಧಿಪತ್ಯಾಭಿಷಿಕ್ತನಂ ನಿನ್ನಂ ಕೊಳುಗುಳಕೆ ಕರೆದುಯ್ಯುವೆಟ್ಟುವೆಂದಾಶಿಸುವೆಂ.

**ಅಶ್ವತ್ಥಾಮಂ**—ಮಾವ! ಇದು ಪ್ರಯೋಜನಮಿಲ್ಲದುದು; ಮೇಣ್ ಪರಾಧೀನಮಾದುದು.

**ಕೃಪಂ**—ಪ್ರಯೋಜನಮಿಲ್ಲದುದುಮಲ್ತು; ಪರಾಧೀನಮಾದುದುಮಲ್ತು. ನೋಡು—

ಘನಭೀಷ್ಮದ್ರೋಣಗ್ರಣಿ |
ಯೆನಿಸುವ ನೀಂ ಭಾರಮಂ ವಹಿಪ್ಪೊಡೆಯಾಯೋ ||
ಧನದಲ್ಲದೆಂತು ದುರ್ಯೋ |
ಧನಬಲಮವರಿಂದೆ ಶೂನ್ಯಮಾದುದೆನಿಕ್ಕುಂ ||೮೧||

ಶಸ್ತ್ರಾದ್ಯುಪಕರಣಂಗಳಂ ಕೈಕೊಂಡಂಗೆ ನಿನ್ನಂತಪ್ಪಂಗೆ ಮೂಲೋಕಮುಮಿದಿರಾಂತು ನಿಲಲಾಱದು: ಇಂ ಯುಧಿಷ್ಠಿರನ ಪಡೆಯೆನಿತಱದು? ಅದಱಿಂದೆನಗಿಂತು ತೋಱುಗುಂ—ಅಭಿಷೇಚನಕೆ ಬೇಳ್ಪುವಂ ಸಾಮಗ್ರಿಗಳಂ ಸಜ್ಜುಗೆಯ್ದು ಕೌರವರಾಜಂ ತಳ್ವದೆ ನಿನ್ನೆಡೆಗೆಯ್ತರ್ಪನೆಂದು.

**ಅಶ್ವತ್ಥಾಮಂ**—ಇಂತಿರ್ಪೊಡೆ ತಿರಸ್ಕಾರಾಗ್ನಿಯಿಂ ಬೇಗುದಿಗುದಿವೆನ್ನ ಮನಮಿದು ಪ್ರತೀಕಾರಮೆಂಬ ಜಳದೊಳ್ ಮಜ್ಜಣಂಗೆಯಲ್ಕೆ ತವಕಿಸುಗುಂ: ಆದುದಱಿನಾನೆ ಪೋಗಿ, ತಾತನಱೆವಿನಿಂದಮುಮ್ಮಳಿಸುತಿರ್ಪನಂ ಕೌರವೇಂದ್ರನಂ ಕಂಡು ಸೇನಾಧಿಪತಿತ್ವಮಂ ಅಪ್ರಾರ್ಥಿತನಾಗಿ ನಾನೆ ಕೈಕೊಳ್ವುದಱಿನಪ್ಪೊಲವಂ ಮೆಱೆದು ಸಂತವಿಟ್ಟು ಆವನದವಟಲಂ ತಱಿಸುಪೆಂ.

**ಕೃಪಂ**—ವತ್ಸ! ಇದಿಂತು.

**ಅಶ್ವತ್ಥಾಮಂ**—ಅದಱಿನತ್ತಣ್ಗೆಯೆ ಪೋಪೆಂ.

(ಎಂದವರೊಡನೆ ಪೋಪಂ.)

(ಬೞಿಕ್ಕಂ ಕರ್ಣದುರ್ಯೋಧನರ್ ಪುಗುವರ್.)

**ದುರ್ಯೋಧನಂ**—ಅಂಗರಾಜ!

ಅರಿನಿಹತಬಂಧುದುಃಖದ |
ತೊಱೆಯನುದಸ್ತ್ರಪ್ಲವಂಗಳಿಂ ತೋಳ್ಗಳಿನು ||
ತ್ತರಿಪಂ ಕಲಿ ಮಗನೞಿವಂ |
ಗುರು ಕೇಳ್ದಿಪುವಾಂಪ ಪದದೊಳದನುೞಿದನದೆಂ ||೮೨||

ಒಂದು ಪಕ್ಷದೊಳ್ "ಪ್ರಕೃತಿರ್ದುಸ್ತ್ಯಜಾ ನಾಮ" ಎಂದು ಸಲೆ ನುಡಿದರಭಿಯುಕ್ತರ್. ಏಕೆನೆ, ಇವಂ ಶೋಕಾಕುಲಮಪ್ಪ ಮನದಿಂ ಕ್ಷತ್ರಧರ್ಮೋಚಿತಮಂ ಕಡುಪನುೞಿದು ಬ್ರಾಹ್ಮಣಸುಲಭಮಂ ನೆಲ್ಪಂ ಕೈಕೊಂಡಂ.

**ಕರ್ಣಂ**—ರಾಯನೆ! ಇದಿಂತಲ್ತು.

**ದುರ್ಯೋಧನಂ**—ಆದೊಡೆ ಇನ್ನೆಂತು?

**ಕರ್ಣಂ**—ಇಂತಲ್ತೆ ಅವನಾಶಯಂ? ಅಶ್ವತ್ಥಾಮನನಾಂ ಭೂಮಂಡಲಸಾಮ್ರಾಜ್ಯದೊಳಭಿಷೇಚಿಸವೇೞ್ಕುಮೆಂದು. ಅವನೆ ಅೞಿದಿಂ ಬೞಿಯಂ ಕೆಟವಂ ಪಾರ್ವನೆನಗೆ ಕೈದುವಿಡಿವುದು ನಿರರ್ಥಮೆಂದಂತು ಗೆಯ್ದಂ.

**ದುರ್ಯೋಧನಂ**—(ಶಿರಃಕಂಪದಿಂ ಕೂಡಿ) ಇಂತಿದು.

**ಕರ್ಣಂ**—ರಾಯನೆ! ಇದರ್ಕವಂ ಪಾಂಡವಕೌರವರೊಳ್ ಪಕ್ಷಪಾತಂಗೊಂಡು ಪೊಣರಲ್ಕೆ ತೊಡಗಿದ ರಾಜಕುಲಂ ಪರಸ್ಪರಂ ಪೊಯ್ದೞಿಗೆಂದು ಮನದೊಳಾಟಿಸಿ ತಾನುಸಿಕವಿರ್ದಂ ಪ್ರಧಾನಪುರುಷಂ ಹತನಾಗುತಿರ್ದೊಡಂ.

**ದುರ್ಯೋಧನಂ**—ಇದು ತಗುಗುಂ.

**ಕರ್ಣಂ**—ಅಂತಲ್ಲದೆಯುಂ ಬಾಲ್ಯದಿಂದಮುಂ ಇವನಿಂಗಿತಮು ಸಮುಚಿತವಂ ದ್ರುಪದಂ ಇವಂಗೆ ತನ್ನ ರಾಷ್ಟ್ರದೊಳಿರಲುಮೆಡೆಯಿತ್ತ ನಿಲ್ಲಂ.

**ದುರ್ಯೋಧನಂ**—ಸಾಧು ಅಂಗರಾಜ! ಸಾಧು. ಒಪ್ಪುವಂತೂ ಹಿಸಿದೆ.

**ಕರ್ಣಂ**—ಇದೆನ್ನೊರ್ವನಭಿಪ್ರಾಯಮಲ್ತು; ಪೆಜರ್ ಅಭಿಯು ಕ್ತರುಮಿಂತಲ್ಲದೆ ಬೇಜೆ ತಾಮಿದಂ ಬಗೆಯರೆವಲಂ.

**ದುರ್ಯೋಧನಂ**—ಇದಿಂತು; ಸಂದೆಗಮೇಂ?

ಇಂತಲ್ಲದಿದ್ದೊಡರ್ಜುನ |
ನಾಂತು ಜಯದ್ರಥನನೆಚ್ಚು ಸಂಹರಿಸುತಿರಲ್ ||
ಅಂತಭಯದಾನಮಂ ಗೈ |
ದಂತಪ್ಪತಿರಥನದೇಕುಪೇಕ್ಷಿಪ್ಪನವಂ ||೮೩||

(ಕೃಪಾಶ್ವತ್ಥಾಮರ್ ಪುಗುವರ್)

**ಕೃಪಂ**—(ನೋಡಿ) ವತ್ಸ! ದುರ್ಯೋಧನಂ ಸೂತಪುತ್ರಂಬೆರಸು ಈವಟವಿಟಪಿಯ ನೆಲೊಳ್ ಕುಳ್ಳಿರ್ಪಂ; ಅದಱಿಂ ಬಳಿಸಾರ್ವಂ. (ಎಂದಶ್ವತ್ಥಾಮನೊಡನೆ ಬಳಿಸಾರ್ದು) ಕೌರವೇಂದ್ರಂಗೆ ವಿಜಯಮಕ್ಕೆ.

**ಕರ್ಣಂ**—(ನೋಡಿ) ಆಃ! ಕೃಪನಶ್ವತ್ಥಾಮನುಂ.

**ದುರ್ಯೋಧನಂ**—(ಪೀಠದತ್ತಣಿನಿಳಿದು) ಗುರುವೆ! ಅಭಿವಂದಿಸುವೆಂ. ಆಚಾರ್ಯಪುತ್ರ!

ಸನಿಹಕೆ ಬಾರೆಲೈ ಪಿತೃವಿಯೋಗಮನೆನ್ನ ನಿಮಿತ್ತದಿಂದಮಾಂ |
ತನೆಯಬಲಿಂ ಬಟಿಲ್ದೊಡಲಿನೆನ್ನೊಡಲಂ ದೃಢದಿಂದೆ ತಟ್ಕೆಗೆಯ್ ||
ಜನಿಸಿರೆಯುಂ ವಿಷಾದಮುಱಿ ಪೊಂಪುಳಿಗೈವುದು ನಿನ್ನ ತೋಳ ಸೋಂ |
ಕೆನಗಿದು ತಾಂ ಭವಜ್ಜನಕನಾ ನಿಡುದೋಳ್ಗಳ ಸೋಂಕಿನಂತೆವೋಲ್ ||

(ಎಂದು ತಟ್ಕೆಗೈದು ಮಗ್ಗುಲಲ್ಲಿ ಕುಳ್ಳಿರಿಪಂ)

**ಅಶ್ವತ್ಥಾಮಂ**—(ಕಣ್ಣೀರಿಡುವಂ)

**ಕರ್ಣಂ**—ಅಶ್ವತ್ಥಾಮನೆ! ಸಾಲ್ಗುಂ; ಮನಮಂ ನೀಡುಂ ಶೋಕಾಗ್ನಿಗೀಡಾಗಿಪುದಱನೇಂ?

**ದುರ್ಯೋಧನಂ**—ಆಚಾರ್ಯಪುತ್ರ! ಈದುಗುಡಗಡಲೊಳ್ ಎಮಗಿರ್ವರ್ಗಂ ವಿಶೇಷಮೇಂ? ನೋಡು—

* ಆತಂ ಭವತ್ಪ್ರಣಯತಾತನೆನಿಪ್ಪನೆನ್ನಾ |
ತಾತಂಗೆ ಮಿತ್ರನೆನಗಂ ನಿನಗಸ್ತ್ರದೋಜಂ ||
ಆತಂ ದಿವಕ್ಕಡರೆ ದುಃಖಮನೇನನೆಂಬೆಂ |
ಚೇತಸ್ಸಿನಿಂದಱ ಸುದುಃಖಿತದಿಂದೆ ನೀನೇ ||೮೫||

**ಕೃಪಂ**—ವತ್ಸ! ಕೌರವೇಂದ್ರನೆಂತು ನುಡಿಗುಮಂತುಟಿವಲಂ.

**ಕರ್ಣಂ**—ಇಲ್ಲಿ ವಿಚಾರದಿನೇಂ?

**ಅಶ್ವತ್ಥಾಮಂ**—ರಾಯನೆ! ನೀನಿಂತು ನುಡಿದ ಬೞಿಕಂ ದುಗುಡಮಂ ತೞ್ಗುವುದು ಯುಕ್ತಮೆ. ಆದೊಡೆ,

ಪೊಡವಿಯೊಳಾನಸುವಿಡಿದಿರ |
ಲೊಡಮೆನ್ನಯ ಜನಕನಕಟ ಕೇಶಗ್ರಹಣ ||
ಕ್ಕೆಡೆಯೆನಿಸಿದನೆನೆ ಸುತರಂ |
ಪಡೆಯಲ್ ಸುತರಹಿತರಿತರರೆಂತಾಶಿಸುವರ್ ||೮೬||

**ಕರ್ಣಂ**—ನೀಂ ಏಗೆಯ್ದಪೆ? ಪರಿಭವಮೇನೊದವಿದೊಡಂ ಅದನೆಲ್ಲಮಂ ಪರಿಹರಿಸಿ ಪೊರೆವುದಂ ಕೈದಂ ತೊಱೆದು ಆತನೇ ಅಂತಪ್ಪ ದಶೆಗೊಳಗಾದಂ.

---

* ಆತಂ ತ್ವತ್ಪ್ರಿಯತಾತಂ |
ತಾತಸಖಂ ನನಗೆ ಶಸ್ತ್ರಗುರು ನಿನಗೆನಗಂ ||
ಆತನ ಮೃತಿಯುೞಿಲಿನಲಳ |
ವೇ ತಿಳಿ ಕಡುದುಗುಡವಿಡಿದ ಮನದಿಂ ನೀನೇ ||

**ಅಶ್ವತ್ಥಾಮನುಂ**—ಅಂಗರಾಜ! ನೀನೇನೆಂದೆ? "ಏಗೆಯ್ದಪೆ" ಎಂದೋ? ಗೆಯ್ವುದನಾಲಿಸು—

ಮೆಱೆವಂ ತೋಳ್ವಲ್ಮೆಯಿಂ ಪಾಂಡವರ ಪಡೆಗಳೊಳ್ ಕೈದನಾಂತಾವನಾವಂ | ಜರಠಂ ಕೂಸಾವನಾವಂ ದ್ರುಪದಕುಲದೆ ಗರ್ಭಸ್ಥನುಂ ಕಂಡನಿಂದಾ || ಪರಿಯಂ ತಾನಾವನಾವಂ ಧುರದೊಳೆನಗೆ ಮಾಱಾಂತ ನಿನ್ನಾವನಾವಂ | ಪರಮುಕ್ರೋಧಾಂಧನೆಲ್ಲಗ್ಗರ್ವರ್ಗೆ ಕಡೆಗೆ ಲೋಕಾಂತಕಂಗಂತಕಂ ನಾಂ ||೮೭||

ಅನಿತೆ ಅಲ್ತು; ಎಲೆ ಪರಶುರಾಮಶಿಷ್ಯ ಕರ್ಣ!

ಅರಿರಕ್ತೋದಕದಿಂದದೆಲ್ಲಿ ಮಡುಗಳ್ ತೀವಿರ್ದುವಾಬೀಡಿದೇ | ಅರಸಂ ಕೇಶಮನೀಟಿಡ್ದುಡಚಿದಪಮಾನಂ ತಂದೆಗಂತಪ್ಪುದೇ || ಪರಶಸ್ತ್ರೋದ್ದಳನಂಗಳೆನ್ನೊಳವೆ ಭಾಸಿಕ್ಕುಂ ಮಹಾಸ್ತ್ರಂಗಳಂ | ದಿರದೇಂಗೆಯ್ದಸೊ ರಾಮನಿಂದದನೆ ಗೈವಂ ಕ್ರೋಧನಂ ದ್ರೋಣಜಂ ||೮೮||

**ದುರ್ಯೋಧನಂ**—ಆಚಾರ್ಯಪುತ್ರ! ಅಂತಪ್ಪೇಳಿದಕ್ಕಂ ಅನಿತರಸಾಧಾರಣಮಪ್ಪ ನಿನ್ನ ಬೀರಕ್ಕಂ ಸದೃಶಮಾದುದು ಪೆಱತಾವುದು?

**ಕೃಪಂ**—ರಾಯನೆ! ಈಮಹಾಯುದ್ಧಭಾರಮಂ ನಿರ್ವಹಿಪೆನೆಂದು ಅಶ್ವತ್ಥಾಮಂ ನಿಶ್ಚಯಂಗೊಂಡಿರ್ಪ್ಪಂ; ಅದಱಿನೆನಗೆ ತೋಱುಗುಂ:—ನೀನೀತನಂ ಪುರಸ್ಕರಿಪುದಾದೊಡೆ ಈತಂ ಮೂಲೋಕಮನಾದೊಡಂ ಧ್ವಂಸಿಸಲಾರ್ಪ್ಪಂ; ಇನ್ನಾಯುಧಿಷ್ಠಿರನ ಪಡೆಯಂ ಏದಳಿಸಲ್ ನೆಱೆವನೆಂದು ಪೇೞ್ವುದೇಂ? ಸೈನ್ಯಾಧಿಪತ್ಯದೊಳ್ ಅಭಿಷೇಚಿಸು.

**ದುರ್ಯೋಧನಂ**—ನೀವೀತನ ವಿಷಯದೊಳ್ ನೆಱೆ ತಕ್ಕುದನೆ ಪೇೞ್ದಿರ್; ಆದೊಡಿದು ಅಂಗರಾಜಂಗೆಂದು ಮೊದಲೆ ಒಪ್ಪುಗೆಯಾಗಿರ್ಕ್ಕುಂ.

**ಕೃಪಂ**—ರಾಯನೆ! ಇಂತಪ್ಪ ಶೋಕಸಾಗರದೊಳ್ ಅೞ್ದನಂ ಈತನಂ ಅಂಗರಾಜನ ದೂಸಱಿಂದುಪೇಕ್ಷಿಪುದೆಂತುಂ ತಕ್ಕುದಲ್ತು.

**ದುರ್ಯೋಧನಂ**—ಅದೇಂ ಶತ್ರುಕುಲಮಲ್ತೆ ಈತನಿಂದಮುಂ ಸದೆಯುವೆೞ್ದುದು ? ಇದಱಿಂ ಕುಂದೇಂ ? ಈತಂಗೆ ಬಾಧೆಯೇನುಮಾಗದು.

**ಅಶ್ವತ್ಥಾಮಂ**—ರಾಯನೆ ! ಈಗಳುಂ ಯುಕ್ತಾಯುಕ್ತವಿಚಾರದಿನೇಂ ?

ಸ್ತುತಿಕಾರರ್ ಯತ್ನದಿಂದೆೞ್ಚರಿಪಪೊಲೆಲೆ ನೀನಿಂದಿರುಳ್ ನಿದ್ರಿಪ್ಪೈ ಶ್ರೀ | ಪತಿಯುಂ ಪಾಂಚಾಲರುಂ ಪಾಂಡುವ ತನುಜರುಮಿಂದುರ್ವಿಯಲ್ಲಿಲ್ಲೆನಿಪ್ಪಂ || ಧೃತಶೌರ್ಯೋದ್ದಂಡದೋರ್ದಂಡರ ರಣಕಥೆ ತಾನಿಂದು ಸಂಪೂರ್ಣಮಕ್ಕುಂ | ಕ್ಷಿತಿಪಾರಣ್ಯಂಗಳಿಂ ವೆಗ್ಗಳಮೆನಿಸಿದ ಭೂಭಾರಕಿಂದಕ್ಕೆ ನಾಶಂ ||೮೯||

**ಕರ್ಣಂ**—(ನಕ್ಕು) ಅಶ್ವತ್ಥಾಮನೆ ! " ಶ್ರೀಪತಿಯುಂ ಪಾಂಚಾಲರುಂ ಪಾಂಡುವ ತನುಜರುಮಿಂದುರ್ವಿಯಲ್ಲಿಲ್ಲೆನಿಪ್ಪಂ " ಎಂಬುದೇನುಂ ದುಷ್ಕರಮಲ್ತು ; ಈಕಜ್ಜಮಂ ನಿರ್ವಹಿಸಲಾರ್ಪರ್ ಕೌರವಬಲದೊಳ್ ಪಲಂಬರಿರ್ಪರ್.

**ಅಶ್ವತ್ಥಾಮಂ**—ಅಂಗರಾಜ ! ಈಕೌರವಬಲದೊಳ್ ಇಂತಪ್ಪ ತುಟಿಲಾಳ್ಗಳ್ ಪಲಬರಿರ್ಕ್ಕುಂ ; ಆದೊಡಾಂ ದುಃಖಾಕುಲನಾಗಿ ಕ್ರೋಧಾವೇಶದಿಂ ಪೇೞ್ದೆನಲ್ಲದೆ ವೀರಜನಮನಧಿಕ್ಷೇಪಿಸವೇೞ್ಕುಮೆಂಬುದಱಿನಲ್ತು.

**ಕರ್ಣಂ**—ಮೂಢ ! ದುಃಖಾಕುಲಂಗೆ ಕಣ್ಣೀರ್ಗಱೆವುದುಂ ಕ್ರೋಧಾವಿಷ್ಟಂಗೆ ಕೈದುವೆರಸು ರಣರಂಗಮನೆಯ್ದುವುದುಮುಚಿತಂ ; ಇಂತಪ್ಪ ವ್ಯರ್ಥಾಲಾಪಂಗಳ್ ತಗವು.

**ಅಶ್ವತ್ಥಾಮಂ**—(**ಕೋಪದಿಂ**) ಎಲೆ ಎಲೆ ರಾಧಾಗರ್ಭಭಾರಭೂತ ! ಸೂತಾಧಮ ! ದುಃಖಾಕುಲಂಗೆ ಕಣ್ಣೀರ್ಗಱೆವುದೇ ಪ್ರತೀ

ಕಾರಮೆಂದು ಅಶ್ವತ್ಥಾಮಂಗೆನಗಂ ಉಪದೇಶಂಗೆಯ್ವಾ? ಶಸ್ತ್ರದಿ ನಲ್ತೊ ಪ್ರತೀಕಾರಂ? ನೋಡು—

ಗುರುಶಾಪಂಬೆತ್ತು ನಿನ್ನಸ್ತ್ರದವೊಲಹಹ ನಿರ್ವೀರ್ಯಮೇನೆನ್ನದೀ ಗಳ್ | ಶರಘಾತಕ್ಕಂಜಿ ನಾಂ ಬಂದನೆ ಕೊಳುಗುಳಮಂ ಬಿಟ್ಟು ನಿನ್ನಂತೆ ನಿನ್ನಂ || ತಿರೆ ನಾಂ ಸ್ತೋತ್ರಜ್ಞಸೂತಾನ್ವಯದೆ ಜನನ ಮಾಂತಿರ್ಪೆನೇ ಕ್ಷುದ್ರನಾಗಿ | ಪ್ಪರಿಗೆಯ್ದಾಗೆಯ್ತಕಾಂ ಮುಯ್ಯೊಡ ರಿಸುವುದು ಕಣ್ಣೀರಿನೋ ಕೈದಿನಲ್ತೋ ||೯೦||

**ಕರ್ಣಂ**—(ಕೋಪದಿಂ) ಎಲೆ ಬಱುವಾತುಗಾರನೆ! ಬಱದೆ ಕೈದುವಿಡಿದು ಆನುಮಾಕೆವಾಳನೆಂದು ತಿಳಿದಿರ್ಪೆಲೆವಟುವೆ!

ಗತವೀರ್ಯಂ ಮೇಣ್ ವೀರ್ಯಾ |
ನ್ವಿತಮೆನಿಸುಗೆ ಕೈದು ತೊಱೆದೆನಿಲ್ಲಮಿದಂ ನಾಂ ||
ನುತಬಾಹುಬಲಂ ನಿನ್ನಯು |
ಪಿತರಂ ಪಾಂಚಾಲಭಯದೆ ತೊಱೆದಂತಿರೆವೋಲ್ ||೯೧||

ಮತ್ತಂ—

ಸೂತನೊ ಮೇಣ್ ಸೂತನ ತನು |
ಜಾತನೊ ನಾನಾವನೊರ್ವನೋ ಎನಿಸಿದಪೆಂ ||
ಭೂತಲದೊಳ್ ತತ್ತತ್ಕುಲ |
ಜಾತಿ ಬಿದಿಯಧೀನಮೆನ್ನಧೀನಂ ಬೀರಂ ||೯೨||

**ಅಶ್ವತ್ಥಾಮಂ**—ಎಲೆ ಎಲೆ ರಥಕಾರಕುಲಕ್ಕೆ ಕಳಂಕಭೂತ ನಾದವನೆ! ಆಯುಧಾನಭಿಜ್ಞನೆ! ತಂದೆಯುಮಂ ತೆಗಟ್ವಾ? ಒಂದು ಪಕ್ಷದೊಳ್—

ಭುವನಪ್ರಖ್ಯಾತಬಾಹಾಬಲಲಸಿತನವಂ ಭೀರುವೋ ಶೂರನೋ ಆ | ಹವದಲ್ಲಿಗೆಯ್ದನೋ ನಿಚ್ಚಲುಮುವನದನೀಮೇದಿನೀದೇವಿ ಬಲ್ಲ ಳ್ || ಅವನಾಗಳ್ ಕೈಯೊಳಿರ್ದಸ್ತ್ರಮನುೞಿದನದೇತಕ್ಕೆನಲ್ ಸಾಕ್ಷಿ

ಸತ್ಯ | ಪ್ರವಣಂ ಧರ್ಮಾತ್ಮಜಂ ತತ್ಸಮರಸಮಯದೊಳ್ ಭೀರುವೆಲ್ಲಿ
ರ್ದ್ದಯೋ ನೀಂ ||೯೩||

**ಕರ್ಣಂ**—(ನಕ್ಕು) ಆಂ ಭೀರುವೆ ವಲಂ; ಆದೊಡೆ ಕೇವಲ ಶಸ್ತ್ರಬಲಸಂಪನ್ನನಂ ನಿನ್ನ ತಂದೆಯುಂ ನೆನೆಯಲೊಡಂ ಎನಗೆ ಬಲ್ಲಂದೆಯಮಕ್ಕುಂ. ಅಲ್ಲದೆಯುಮೆಲೆ ಗಾಂಪ!

ತೊಱೆದೊಡಮಸ್ತ್ರಮನದಟು |
ಳ್ಳರದೇಂ ಕೈದಾಂತ ಪಗೆಗಳಂ ಬಾರಿಸರೇ ||
ಸಿರಿವರಿವಂದುಂ ಚಿರಮರ |
ಸರ ಸರಿಸದೆ ಪೆಣ್ಬೊಲುಸಿಕನವನಿರ್ದ್ದನದೇಂ ||೯೪||

**ಅಶ್ವತ್ಥಾಮಂ**—(ಕ್ರೋಧದಿಂ ಕಂಪಿಸುತ್ತೆ) ದುರಾತ್ಮನೆ! ಅರಸನೊಲವಿಂಗೆ ಪಾತ್ರಮಾದುದಱಿಂ ಬಿತ್ತಿಗನೆನಿಸಿರ್ಪ್ಪನೆ! ಸೂತಾಧಮನೆ! ಅಸಂಬದ್ಧಪ್ರಲಾಪಿಯೆ!

ಗುರುವಱಲಿನೊ ಭಯದಿನೊ ತ |
ತ್ಕರಮನದೇಕಱಿನೊ ತಡೆಯನೆಲೆ ಭುಜಮದದಿಂದಂ ||
ಜಱುಚುವ ನಿನ್ನಯ ಸಿರದ |
ಲ್ಲಿರಿಸುವೆನೆಡಗಾಲನೀಗಳಿದನಾಂ ತಡೆ ನೀಂ ||೯೫||

(ಎಂದೇಟ್ವಂ)

**ಕೃಪಂ**—ಸ್ಥೈರಿಸು ಸ್ಥೈರಿಸು. (ಎಂದು ತಡೆವಂ)

**ದುರ್ಯೋಧನಂ**—ಸ್ಥೈರಿಸು ಸ್ಥೈರಿಸು (ಎಂದು ಕರ್ಣನಂ ತಡೆವಂ)

**ಕರ್ಣಂ**—(ರೋಷದಿಂದೆದ್ದು ಕರವಾಳನೀಟ್ದು) ಎಲೆ ದುರಾತ್ಮನೆ! ಬ್ರಹ್ಮಬಂಧುವೆ! ಆತ್ಮಶ್ಲಾಘಿಯೆ!

ಅವನಿಸುರಜಾತಿಯಿಂ ನೀ |
ನವಧ್ಯನೆನಿಸಿದಪೆ ಮಾಬ್ಬುದೇನೆತ್ತಿದ ಪಾ ||

ದವನಿದನೀಕೂರಸಿಯಿಂ |
ದವೆ ಕಡಿವೆಂ ನೆಲದೆ ಬೀಳ್ವುದುಂ ನೀನಱಿವೈ ||೯೬||

**ಅಶ್ವತ್ಥಾಮಂ**—ಎಲೆಎಲೇಮೂಢ! ಏಂ ಜಾತಿಯಿಂದಾಂ ನಿನ ಗವಧ್ಯನೋ? ಇದೆ ಬಿಟ್ಟೆನಾಜಾತಿಯಂ(ಎಂದು ಯಜ್ಞೋಪವೀತಮಂ ಕೀಳ್ವಂ)

**ಕೃಪಂ**—(ತಡೆವಂ)

**ಅಶ್ವತ್ಥಾಮಂ**—

ಈಗೋತ್ರಭಿತ್ಕುಮಾರನ |
ನೀಗಳ್ ಮಿಥ್ಯಾಪ್ರತಿಜ್ಞನಂ ಮಾಡುವೆನಾಂ ||
ಬೇಗಂ ಕೈಕೊಳ್ಳಸ್ತ್ರಮು |
ನಾಗದೊಡಿದನುೞಿದು ಸಿರದೊಳೆಸಗಂ ಜಳಿಯಂ ||೯೭||

(ಇರ್ವರುಂ ಕಡುಗವುನೀೞ್ದು ಓರೊರ್ವರಂ ಪೊಯ್ಯಲ್ ತೊಡಗುವರ್)

**ಕೃಪದುರ್ಯೋಧನರ್**—(ತಡೆವರ್)

**ದುರ್ಯೋಧನಂ**—ಆಚಾರ್ಯಪುತ್ರ! ಸಾಲ್ಗುಂ; ಕೈಯೊಳಿರ್ಪ್ಪ ಕೈದನುೞಿ.

**ಕೃಪಂ**—ಎಲೆವತ್ಸ! ಎಲೆಸೂತಪುತ್ರ! ಸಾಲ್ಗುಂ; ಶಸ್ತ್ರಮನುೞಿಯಿಂ.

**ಅಶ್ವತ್ಥಾಮಂ**—ಮಾವ ಮಾವ! ಅದೇಕೆ ತಡೆವೈ? ಅಯ್ಯನಂ ತೆಗಳ್ವುದಱೊಳ್ ಬಿತ್ತಿಗನಾದೀಸೂತಕುಲಾಧಮಂ ನೀಚಧೃಷ್ಟದ್ಯುಮ್ನಪಕ್ಷಪಾತಿಯೇ ಅಲ್ತೇ?

**ಕರ್ಣಂ**—ರಾಯನೆ! ಬಿಡು ಬಿಡು ಇವನಂ ಕೊಲಲ್.

**ಅಶ್ವತ್ಥಾಮಂ**—ಎನ್ನ ತೋಳ್ಗಳ ನಡುವೆ ತೀಡಿ ತಿಕ್ಕುವುದಱಿಂ ಇವನ ಹರಣಂಗಳ ಹರಣಂ ಸುಕರಮಾಗಿರ್ಕ್ಕುಂ. ಅಂತಲ್ಲದೆಯುಂ, ರಾಯನೆ! ಕೆಳೆತನದಿಂದಮೋ ಕಜ್ಜಮಾಗವೇೞ್ಕುಮೆಂಬುದಱಿಂದಮೋ ನೀಂ ಅಯ್ಯನಂ ತೆಗಳ್ವನಂ ಈಕೇಡಿಗನಂ ಎನ್ನತ್ತಣಿಂ ಸಲಹಲಾಟಿಪೆ. ಇವೆರಡುಂ ನಿರರ್ಥಮಲ್ತೇ? ನೋಡು—

ಪಾತಕಿ ಸೂತಸಂಭವನಿವಂ ಗುಣಶಾಲಿ ಸುಧಾಕರಾನ್ವಯೋ |
ದ್ಭೂತನೆನಿಪ್ಪೆ ನೀಂ ನಿನಗದೆಂತುಟಿವಂ ಕೆಳೆಯುಂ ಸಹಾಯನುಂ ||
ಘಾತಿಪನೇನಿವಂ ವಿಜಯನಂ ಬಿಡು ಭೂಪನೆಯಿಂದು ಕೋಪದಿಂ |
ಭೂತಲದಲ್ಲಿ ಕರ್ಣನಿವನಿಲ್ಲ ಧನಂಜಯನಿಲ್ಲೆನಿಪ್ಪೆನಾಂ ||೯೮||

(ಎಂದು ಪ್ರಹರಿಸಲುಜ್ಜುಗಿಸುವಂ).

**ಕರ್ಣಂ**—(ಕಡುಗಮುನಿಸಿಂದು) ಎಲೆ ಬಱುವಾತುಗ! ಇನ್ನಾಯ್ತು ನಿನ್ನವತಾರಂ. ರಾಯನೆ! ಬಿಡು ಬಿಡು. ಎನ್ನನೀಗಳ್ ತಡೆಯಲಾಗದು.

ವರಧೀರಸತ್ತ್ವಶಾಲಿಗ |
ಳುಱೆ ಕೋಪಂದಾಳ್ದು ಭಯಮನೊಡರಿಸದೆಯನಾ ||
ದರದಿಂದಮುಪೇಕ್ಷಿಸೆಯಿಾ |
ಪರಿಯೊಳ್ ಸ್ವಚ್ಛಂದದಿಂದೆ ಜಱುಚುವರಲ್ಪರ್ ||೯೯||

(ಎಂದು ಪೊಯ್ಯಲಿಚ್ಛಿಪಂ),

**ಇರ್ವರುಂ**—(ತಡೆವರ್).

**ದುರ್ಯೋಧನಂ**—ಕರ್ಣಗುರುಪುತ್ರರಿರ! ಈಗಳ್ ನಿಮಗಿದೇಂ ಮರುಳ್?

**ಕೃಪಂ**—ವತ್ಸ! ಪೆಱತೆವಲಂ ತೊಡಗಿದುದು; ಪೆಱತೊಂದ ಱೊಳಭಿನಿವೇಶಂ. ಇದೇಂ ಗಾಂಪತನಂ? ಈಪೊಟ್ಟನೊಳೀನಿಜಸ್ವೈ ನ್ಯೋಪಘಾತವಿಾರಾಜಕುಲಕ್ಕೆ ನಿಮ್ಮತ್ತಣಿಂದಮೆ ಉಂಟಪ್ಪುದೆಂಬುದು ಪ್ರತಿಕೂಲಮಪ್ಪ ದಾರಿ.

**ಅಶ್ವತ್ಥಾಮಂ**—ಮಾವ! ಕರ್ಣಕಠೋರಮಪ್ಪಿನಂ, ಜಱುಚು ತಿಪ್ಪೀರಥಕಾರಕುಲಾಧಮನ ಬಿಂಕಮನಡಂಗಿಸಲೊದವಿಲ್ಲಂ.

**ಕೃಪಂ**—ಅಣುಗ! ಸ್ವಪಕ್ಷದೊಳ್ ಪ್ರಧಾನನೊಡನೆ ಪಗೆಯು ಲ್ಕಿದು ಆಸಮಯಮಲ್ತೇ?

**ಅಶ್ವತ್ಥಾಮಂ**—ಮಾವ! ಇಂತಪ್ಪೊಡೆ—

ಅರಿಬಾಣಂಗಳನೆನ್ನೆಗಂ ಮಡಿಯುನೋ ಪಾಪಾತ್ಮನಾಗಿಪ್ಪೆವಂ| ತೊಱೆದೆಂ ಶಸ್ತ್ರಮನನ್ನೆಗಂ ಪ್ರಿಯಮುಮಂ ಸಂಗ್ರಾಮದೊಳ್ ನಾನಿದಂ || ಉರುಕೋಪಾಕುಲಭೀಮಪಾರ್ಥಭಯದಿಂದೀಸ್ಸೈನ್ಯಪಂ ಚಿಂತಿಸು | ತ್ತಿರೆ ಯುದ್ಧಾಂಗಣದಲ್ಲಿ ತಾನಱಿವನೀಸನ್ಮಿತ್ರನಾರ್ಸಂ ನೃಪಂ||

(ಎಂದು ಖಡ್ಗಮಂ ಪರಿತ್ಯಜಿಪಂ)

**ಕರ್ಣಂ**—(ನಕ್ಕು) ನಿಮ್ಮನ್ನರ್ ಆಯುಧಮಂ ಪರಿತ್ಯಜಿಪದಿದ್ದೊಡಂ ಪ್ರಯೋಜನಮಿಲ್ಲದುದಱಿಂ ಚಿರಕಾಲದಿಂ ಪರಿತ್ಯಜಿಸಿದಂತೆಯೆ. ಅಲ್ಲದೆಯುಂ—

ಕಡುಗಮನಾನೆನ್ನೆವರಂ |
ಪಿಡಿವೆನೊ ಅನ್ನೆವರಮಿತರಖಡ್ಗಂಗಳಿನೇಂ ||
ಕಡುಗದಿನಿದಱಿಂದಾಗದ |
ಕಡುಗಜ್ಜಂ ಜಗದೊಳಕ್ಕುಮಿನ್ನಾವುದಱಿಂ ||೧೦೧||

(ನೇಪಥ್ಯದೊಳ್)

ಆಃ ದುರಾತ್ಮನೆ! ದ್ರೌಪದೀಕೇಶಾಂಬರಂಗಳನೀಡ್ದ ಪಾತಕಿಯೆ! ಧಾರ್ತ್ರರಾಷ್ಟ್ರಾಧಮನೆ! ನೀಂ ಚಿರಕಾಲಕ್ಕೆ ರಣರಂಗಮನೆಯ್ದಿದೆ. ಎಲೆ ಕ್ಷುದ್ರಪಶುವೆ! ಈಗಳೆತ್ತ ಪೋದಪೆ? ಎಲೆ ಎಲೆ ಪಾಂಡವವೈರಿಗಳುಂ ಧನುರ್ಧಾರಿಗಳುಂ ಮಹಾರಥರುಮಾದ ಕರ್ಣದುರ್ಯೋಧನಶಕುನಿಪ್ರಮುಖರಿರಾ! ನೀಂ ಕೇಳಿಂ—

ನರಪಶು ತಾನದಾವನೆಟಿಿದಂ ದ್ರುಪದಾತ್ಮಜೆಯಾ ಕುರುಳ್ಗಳಂ| ಗುರುನೃಪರಗ್ರದಲ್ಲಿವಳ ಸೀರೆಯನೀಡ್ದನದಾವನಂದು ಮೇಣ್ || ನೆಱೆ ಬಗಿದಾನದಾವನೆರ್ದೆಯಂ ರಕುತಂಗುಡಿಯಲ್ಕೆ ಪೂಣ್ದೆನಾ | ಕುರುಸುತನಿಂದು ಬಿಡ್ದಿನಿದೆ ಮದ್ಭುಜಪಂಜರದಲ್ಲಿ ರಕ್ಷಿಸಿಂ ||೧೦೨||

**ಎಲ್ಲರುಂ**—(ಆಲಿಪರ್).

**ಅಶ್ವತ್ಥಾಮಂ**—ಅಂಗರಾಜ! ಸೇನಾಧಿಪ! ತೋಳ್ಬಲ್ಮೆಯಿಂದೆಲ್ಲರುಮಂ ಪೊರೆವವನೆ! ಪರಶುರಾಮಶಿಷ್ಯನೆ! ದ್ರೋಣಾಚಾರ್ಯನನಪಹಾಸಂಗೆಯ್ದನೆ! ಅರಸನ ಪ್ರಿಯಮಿತ್ರನೆ!

" ಕಡುಗಮನಾನೆನ್ನೆವರಂ |
ಪಿಡಿವೆನೊ ಅನ್ನೆವರಮಿತರಖಡ್ಗಂಗಳನೇಂ ||
ಕಡುಗದಿನಿದಱಿಂದಾಗದ |
ಕಡುಗಜ್ಜಂ ಜಗದೊಳಕ್ಕುಮಿನ್ನಾವುದಱಿಂ || "

ಎಂದೆಯಲ್ತೆ ? ಇದಕ್ಕೆ ಸಮಯಮತಿಸನ್ನಿಹಿತಮಾಗಿಯೆ ಒದವಿದತ್ತು. ಈಗಳ್ ರಕ್ಷಿಸು ಭೀಮನತ್ತಣಿನೀದುಶ್ಶಾಸನನಂ.

**ಕರ್ಣಂ**—ಆಃ! ನಾಂ ಜೀವಿಸಿರ್ಪನ್ನೆಗಂ ಯುವರಾಜನ ನೆಱಲನಾಕ್ರಮಿಪುದರ್ಕಂ ಭೀಮಂಗೆ ಶಕ್ತಿಯುಂಟೇ ? ಯುವರಾಜ! ಭಯಂಗೊಳ್ಳದಿರ; ಭಯಂಗೊಳ್ಳದಿರ. ಆನೀಬಂದೆಂ (ಎಂದು ಪೋಪಂ)

**ಅಶ್ವತ್ಥಾಮಂ**—ಮಹಾರಾಜದುರ್ಯೋಧನ! ಈಗಳ್ ಭೀಷ್ಮದ್ರೋಣರಿಲ್ಲದ ಕೌರವಬಲಮಂ ಕ್ಷೋಭೆಗೊಳಿಸುತಿರ್ಪರಂ ಭೀಮಾರ್ಜುನರಂ ಕರ್ಣನೋ ಇವನಂತಪ್ಪಂ ಪೆಱನೋ ಬಾರಿಸಲರಿದು ; ಆದಱಿಂ ನೀನೆ ತೆರಳ್ದು ಸಹೋದರಂಗೆ ನೆರವಾಗಿ ಪ್ರತಿಕ್ರಿಯೆಯೊಳ್ ಮನಂಗೆಯ್.

**ದುರ್ಯೋಧನಂ**—ಆಃ! ಬಿಲ್ವಿಡಿದಂ ನಾಂ ಜೀವಿಸಿರೆ, ದುರಾತ್ಮಂಗೆ ಭೀಮಂಗೆ, ಮೇಣ್ ಪೆಱಂಗೆ ವತ್ಸನ ನೆಱಲನಾಕ್ರಮಿಪುದರ್ಕಂ ಶಕ್ತಿಯಿರ್ಕುಮೆ ? ವತ್ಸ ! ದುಶ್ಶಾಸನ ! ಪೆಱರದಿರ ; ಪೆಱರದಿರ. ರಥಂ ರಥಂ. (ಎಂದು ಪೋಪಂ)

(ನೇಪಥ್ಯದೊಳ್ ಕಲಕಲಮಕ್ಕುಂ)

**ಅಶ್ವತ್ಥಾಮಂ**—(ಮುಂತೀಕ್ಷಿಸಿ) ಮಾವ ಮಾವ! ಚೀಃ ಕಷ್ಟಂ ಕಷ್ಟಂ!! ಇವಂ ಅಣ್ಣನ ಪೂಣ್ಕೆಗೆ ಅದೆಲ್ಲಿ ಬನ್ನಮಪ್ಪುದೋ ಎಂದು ಭಯಂಗೊಂಡರ್ಜುನಂ ಏಕಕಾಲದೊಳ್ ದುರ್ಯೋಧನಕರ್ಣರಂ ಸರಲ್ಮಱಿಗಳಿನೆಚ್ಚಪಂ. ಕಷ್ಟಂ ಕಷ್ಟಂ!! ಭೀಮಂ ದುಶ್ಶಾಸನನ ನೆತ್ತರಂ ಪೀರ್ದಪನೆವಲಂ ; ಆದಱಿಂ ದುರ್ಯೋಧನಾನುಜಂಗೊದವಿದೀವಿಪತ್ತಿಯಂ

ನಾಂ ನೋಡಲ್ ಸಹಿಸೆಂಗಡಾ! ಪುಸಿಯುಪ್ಪೊಡಮಕ್ಕೆ; ಮಾವ ಮಾವ! ಶಸ್ತ್ರಂ ಶಸ್ತ್ರಂ.

ತವೆ ಲೇಸು ಸತ್ಯದಿಂ ಪುಸಿ |
ದಿವಕ್ಕೆ ಧಿಕ್ಕಾರಮೆನಗೆ ಸಮನಿಕೆ ನರಕಂ ||
ಪವನಸುತನತ್ತಣಿಂದಂ |
ಯುವರಾಜನನೋವಲುೞಿದುದಿಲ್ಲುೞಿದಸ್ತ್ರಂ ||೧೦೩||

(ನೇಪಥ್ಯದೊಳ್) ಎಲೆ ಮಹಾತ್ಮ ದ್ರೋಣಪುತ್ರ! ಮುನ್ನೆಂದುಂ ಮಾಱದಿರ್ದ್ದ ಸತ್ಯವಚನಮಂ ನೀನಿಂದು ಮಾಱುವುದುಚಿತಮಲ್ತು.

**ಕೃಪಂ**—ವತ್ಸ! ಅಶರೀರವಾಣಿ ಅಸತ್ಯವಚನದತ್ತಣಿಂ ನಿನ್ನಂ ಕಾಗುಂ.

**ಅಶ್ವತ್ಥಾಮಂ**—ಆಃ ಇದೇಂ? ಅಶರೀರವಾಣಿ ರಣರಂಗಮನೆನ್ನೆಯ್ದುವುದನನುಮತಿಸದು. ಆಕಟ ಕಷ್ಟಂ ಕಷ್ಟಂ!! ಆಃ! ದೇವರ್ಕ್ಕಳುಂ ಪಾಂಡವಪಕ್ಷಪಾತಿಗಳ್. ಭೀಮಂ ದುಶ್ಶಾಸನನ ನೆತ್ತರಂ ಈಂಟಿದನೆವಲಂ. ಅಹಹ ಕಷ್ಟಂ ಕಷ್ಟಂ!!

ಉಱೆ ದುಶ್ಶಾಸನನೆರ್ದೆನೆ |
ತ್ತರನೀಂಟುತ್ತಿರೆಯುಮುಸಿಕನಿರ್ಪವನಾದೆಂ ||
ಪೆಱತಂ ಪ್ರಿಯಮನದೇನಂ |
ಧುರದೊಳ್ ದುರ್ಯೋಧನಂಗೆ ನಾನೊಡರಿಸುವೆಂ ||೧೦೪||

ಮಾವ ಮಾವ! ಕರ್ಣಂಗೆ ಕನಲ್ದು ನಾನಕಾರ್ಯಮಂ ಗೆಯ್ದೆಂ; ಅದಱಿಂ ನೀನಾದೊಡಂ ಅರಾಯನ ಪಕ್ಕದೊಳಿರ.

**ಕೃಪಂ**—ಆನಿಲ್ಲಿ ಪಡಿಗೆಯಲ್ಕೆ ಪೋದಪೆಂ; ನೀನುಂ ಪಾಳೆಯಕ್ಕೇ ತೆರಳ್.

(ಎಂದಿರ್ವ್ವರುಂ ತೆರಳ್ವರ್)

ಇಂತಿದು ತೃತೀಯಾಂಕಂ.



# ತುರೀಯಾಂಕಂ.

---

(ಬಟುಕೆ ಪ್ರಹಾರದಿಂ ಮುಚ್ಚೆವೋಗಿ ರಥದೊಳಿರ್ದ್ದನಂ ದುರ್ಯೋಧನನಂ
ಉಯ್ವ ಸೂತಂ ಪೊಕ್ಕು ಸಂಭ್ರಾಂತನಾಗಿ ಚರಿಪಂ.)

(ನೇಪಥ್ಯದೊಳ್)

ಎಲೆಎಲೆ ತೋಳ್ಬಲ್ಮೆಯ ಕೊರ್ವಿನಿಂ ಬಲ್ಗಾಳೆಗದೊಳ್ ಬಯಕೆಗೊಂಡು ತೊಡಗಿ, ಕೌರವಪಕ್ಷಪಾತದಿಂ ಹರಣಂಗಳೆಂಬ ಪಣಂಗಳ ರಾಶಿಯುಂ ಪಣವಾಗಿಸಿದ ರಾಯರಿರಾ! ಪೀರ್ದ್ದುಟಿದ ಹತದುಶ್ಶಾಸನನ ಕೆನ್ನೀರ ಪ್ರವಾಹದಿಂ ಭೀಮವೇಷನಾಗಿರ್ಪ್ಪ ಭೀಮನ ದರುಶನದಿನಾದ ವಿಷಾದದಿಂ ಕೈಯ ಕೈದುಗಳ್ ಸಡಿಲ್ದು ಬೀಟ್ವನಂ, ಪಲಾಯನಂಗೆಯ್ವ ಪಡೆಗಳಂ ನಿಲಿಸಿಂ ನಿಲಿಸಿಂ.

**ಸೂತಂ** :—(ನೋಡಿ) ಇದೇಂ? ಮಿಳಿರ್ವ ಬೆಳ್ಪಮರದಿಂ ಕೂಡಿ ಪೊಂಗಳಸಮೆಂಬ, ತಲೆವಣಿಯುಂ ತಾಳ್ದು ಕಣ್ಗೊಳ್ವ ಪಟವಿಗೆಯಿಂದೆ ಸೂಚಿತಮಾಗಿಯುಂ ಹತಂಗಳಾದಾನೆಕುದುರೆಗಳ ಮೇಣ್ ಮಾನಸರ ಒಡಲ್ಗಳ ಸಂಮರ್ದದಿಂ ನಿಮ್ನೋನ್ನತಂಗಳಪ್ಪೆಡೆಗಳೊಳ್ ಕುಲುಕುವುದಱಂದೆ ಝುಣಝುಣಿಪ ಕಿಱುಗಂಟೆಗಳ ಗಡಣದ ಸಾಲ್ಗಳಿಂ ಪರಿಶೋಭಿತಮಾಗಿಯುಮಿರ್ಪ್ಪ ರಥಮನೇಱ ಸರಲ್ಸರಿಯಿಂ ಪಡಿವಕ್ಕದ ಕಟ್ಟಾಳ್ಪ್ಪರಂ ಭಂಗಿಪನಾಗಿ ಮುಂದೋಡುವ ನಿಜಸೈನ್ಯಮಂ ಸಂತವಿಡುತ್ತೆ ಕೃಪನಿಂ ಅರ್ಜುನನೊಡನಿದಿರ್ಚ್ಚಿ ಪೊಣರ್ವ ಕರ್ಣಂಗೆ ಸಾಹಾಯ್ಯಮನೆಸಗಲ್ಕೆ ಬಟುಸಾರುತಿರ್ದ್ದಪಂ; ಆಹಹ! ಎಮ್ಮ ಪಡೆಗವಲಂಬನಮೊದವಿತ್ತು. (ಮತ್ತೆ ನೇಪಥ್ಯದೊಳ್ ಕಲಕಲವಾದಿಂಬಟುಯುಂ) ಎಲೆ ಎಲೆ, ಭಯಂ ಮಿಗೆ ಕೈಯತ್ತಣಿಂ ಸಡಿಲ್ದು ಬೀಟ್ವ ತೋಮರಂ ಬಿಲ್ ಶಕ್ತಿಮುಂತಪ್ಪ ಕೈದುಗಳುಳ್ಳ ಕೌರವಸೇನಾಭಟರಿರಾ! ಪಾಂಡವಪಕ್ಷಪಾತಿ

ಗಳಾದ ಯೋಧರಿರಾ! ಬೆದಱದಿರಿಂ ಬೆದಱದಿರಿಂ. ಹತನಾದ ದುಶ್ಶಾಸನನ ಪೇರೆರ್ದೆಯ ರಕ್ತಾಸವದ ಪಾನದಿಂ ಮದೋದ್ಧತನುಂ ರಭಸದಿಂ ನಡೆವನುಂ ಇನ್ನಿನಿಸುಟೀದಿರ್ಪ್ಪ ಪೂಣ್ಕೆಯ ಪೇರುಕ್ಕೆವಮುಳ್ಳನುಂ ಕೌರವೇಂದ್ರನ ದ್ಯೂತಜಿತನಾದ ತೊೞ್ತುಂ ಕೊಂತಿಗುವರರೊಳ್ ನಡುವಣನುಂ ಆದ ಈಭೀಮಸೇನನಾಂ ನಿಮ್ಮನೆಲ್ಲರಂ ಸಕ್ಕಿಗೆಯ್ದು ಪೇೞ್ದಪೆಂ; ಕೇಳಿಂ—

ಕ್ಷಿತಿಪಂ ಮಾನಧನಂ ಶರಾಸನಧರಂ ದುರ್ಯೋಧನಂ ಜಾಗರೂ |
ಕತೆಯಿಂ ಸೌಬಲಕರ್ಣಶಲ್ಯರವರುಂ ನೋಡುತ್ತಿರಲ್ ಮುಂದೆ ಜೀ ||
ವಿತಮಿರ್ಪ್ಪಾಗಳೆ ಇಂದು ಕೂರುಗುರ್ಗಳಿಂ ನಾಂ ವಕ್ಷಮಂ ಸೀಳ್ದು
ಶೋ | ಣಿತಮಂ ಕೋಷ್ಣಮನೀಂಟಿದೆಂ ದ್ರುಪದಜಾಕೇಶಾಂಬರಾ
ಕರ್ಷಿಯಾ ||೧೦೫||

**ಸೂತಂ**—(ಆಲಿಸಿ, ಬಿಗುರ್ತು) ಆಃ! ರಾಯುಗುವರರೆಂಬ ಪೇರಡವಿಗೆ ಉತ್ಪಾತವಾತವೆನಿಸಿದ ಕೇಡಿಗಂ ವಾತಾತ್ಮಜಂ ಒಟಿಗೇ ಬಂದಂ. ಮಾರಾಯನಿಲ್ಲಿ ಮುಚ್ಚೆಯಿಂದಿನ್ನುಂ ಎೞ್ಚತ್ತನಿಲ್ಲಂ. ತೇರಂ ದೂರಮುಯ್ವೆಂ. ದುಶ್ಶಾಸನಂಗೆಸಗಿದಂತೊಮ್ಮೆ ಕೇಡಿಗನಿವನೀತಂಗಂ ಕೇಡನೆಸಗುವನಕ್ಕುಂ. (ಎಂದು ತುರಿಪಂಮಿಗೆ ಕಿಱಿದುದೂರಂ ಸಾರ್ದು ನೋಡಿ) ವಟವಿಟಪಿಯಿದು ತಿಳಿಗೊಳದ ತಾವರೆಗಳ ಮೇಲೆ ತೀಡಿ ಮಗಮಗಿಪ ತಣ್ಗಾಳಿಯಿಂದುಯ್ಯಲಾಡುವ ತಳ್ತಡಸಿದ ಚಿಗುರ್ಗಳಿಂ ಶೋಭಿಪುದು. ತಾಣಮಿದು ಧುರದೊಳ್ ಬಟಲ್ದ ಬೀರರ ವಿಶ್ರಾಂತಿಗೆ ತಕ್ಕುದೆನಿಕ್ಕುಂ. ಎಮ್ಮ ಮಾರಾಯುಂ ಇತ್ತಲಿರ್ದೊಡೆ ಸುಲಭಮೆನೆ ತಾನಾಗಿ ಬಿಜ್ಜಣಿಗೆಯಂತೆ ಬೀಸುತ್ತುಂ ಅಪ್ರಯತ್ನದಿಂ ಸೌಸವಂಬೆತ್ತು ಘುಮಘುಮಿಸುತ್ತುಂ ಮೂರ್ಛಾವಸ್ಥೆಯಂ ಕಳೆಯಲ್ತಕ್ಕುದೆನೆ ಮನಕೊಪ್ಪುವ ಈತಣ್ಣೆಲರಿಂ ಈತನಾಯಸಂ ಉಪಶಾಂತಮಾಗದಿರದು. ಪಟವಿಗೆ ಮುಱುದುದಱುಂದೆ ಈತೇರ್ ತಡೆಯಿಲ್ಲದೆ ಈಮರದ ನೆೞಲೊಳ್

ನಿಲಲಪ್ಪುದು. (ಮರದ ನೆಟಿಲೊಳ್ ನಿಂದಂತಭಿನಯಿಸಿ) ಆದಾವನಿಲ್ಲಿ? (ಸುತ್ತಲುಂ ವಿಲೋಕಿಸಿ) ಇದೇಂ? ಪರಿಜನವಾವುದುಮಿಲ್ಲಂ. ನಿಕ್ಕುವಂ ಅಂತಪ್ಪ ಭೀಮಸೇನನ ದರುಸನದಿಂದಮುಂ ಒಡೆಯಂ ಇಂತಪ್ಪ ಕಿಡುದಸೆಯಂ ಪಡೆದಿರ್ಪ್ಪನೆಂಬ ಭಯದಿಂದಮುಂ ಸಕಳರುಂ ಪಾಳೆಯುಮನೆ ಪೊಕ್ಕಿರ್ಪ್ಪರಕ್ಕುಂ. ಕಷ್ಟಂ ಅಹಹ ಕಷ್ಟಂ!!

ಗುರುವಭಯಮನಿತ್ತುಂ ಸಿಂ |
ಧುರಾಜನಂ ಪಾರ್ಥನತ್ತಣಿಂ ಸಲಹಿದನಿ ||
ಲ್ಲರರೇ ದುಶ್ಶಾಸನನಂ |
ಹರಿಣಮನೆಂತಂತು ಪಿಡಿದು ಬಗಿದಂ ಭೀಮಂ ||೧೦೬||

ಇದಸಾಧ್ಯಂ ಬವರದೊಳೆಂ |
ಬುದಮಂ ಶತ್ರುಪ್ರತಿಜ್ಞೆಯಂ ಲಘುವೆನೆ ತೀ ||
ರ್ಚಿದುದು ಕುರುವಂಶವಿಮುಖಂ |
ಬಿದಿಯಿನ್ನುಂ ತಣಿದುದಿಲ್ಲಮೆಂದಾನಱಿವೆಂ ||೧೦೭||

ಇದೇಂ? ಇನಿಪೊಟ್ತಾದೊಡಂ ಮಹಾರಾಜದುರ್ಯೋಧನಂಗೆ ಎಚ್ಚಱಾದುದಿಲ್ಲಂ. ಅಕ್ಕಟಾ! ಕಷ್ಟಂ ಕಷ್ಟಂ!! ಮಹಾರಾಜನೆ!

ಮುಱಿದಿಡುತಿರೆ ಮದಿಸಿದ ಕರಿ |
ಮರನೊಂದುಟಿದಡವಿಯಂತೆವೋಲೆಲ್ಲಕುಮಾ ||
ರರುಮುಟಿದೀಕುಲದೊಳ್ ನೀಂ |
ಗುಱಿಯಾಗಿರ್ದ್ದಪೆ ಕಟಾಕ್ಷಕೀಗಳ್ ಬಿದಿಯಾ ||೧೦೮||

ಭರತಕುಲಪರಾಙ್ಮುಖಮಾದೆಲೆ ಕಿಡುದೆವ್ವಮೆ!

ಕ್ಷತಮಂ ತಾಳದೆ ಕರಪರಿ |
ಧೃತಗದನಾಗಿರುತೆ ಜಯದೆ ನಿಸ್ಸಂದೇಹ ||
ಸ್ಥಿತಿಯಾಂತ ವೃಕೋದರನೀ |
ಪ್ರತಿಜ್ಞೆಯುಮನಿಂದು ಪೂರಣಂಗೊಳಿಸುವೆ ನೀಂ ||೧೦೯||

**ದುರ್ಯೋಧನಂ**—(ತರದಿಂದೆಚ್ಚೆತ್ತು) ಆಃ! ದುರ್ಯೋಧನಂ ನಾಂ ಬರ್ದುಂಕಿರೆ, ದುರಾತ್ಮಂಗೆ ನೀಚಭೀಮಸೇನಂಗೆ ಪ್ರತಿಜ್ಞೆಯಂ ಪೂರಣಂಗೊಳಿಸಲ್ಕೆ ಸಾಮರ್ಥ್ಯಮುಂಟೇ? ವತ್ಸ! ದುಶ್ಶಾಸನ! ಅಂಜದಿರಂಜದಿರ್. ನಾನೀಬಂದೆಂ. ಸೂತ! ವತ್ಸನಂ ಎತ್ತ ನೋಡ ಲಕ್ಕುಮೋ ಅತ್ತಣ್ಗೆ ರಥಮಂ ಬಿಡು.

**ಸೂತಂ**—ಆಯುಷ್ಮಂತನೆ! ಈಗಳ್ ನಿನ್ನಶ್ವಂಗಳ್ ರಥಮಂ ವಹಿಸಲಾಱವು; (ಮಱಿಯೊಳ್) ಅಮ್ಮುಂ ನಿನ್ನ ಮನೋರಥಮಂ.

**ದುರ್ಯೋಧನಂ**—(ರಥದತ್ತಣಿಂದಿೞಿದು ಬಿಂಕಂಗೊಂಡು) ಸಾಲ್ಗುಂ; ರಥನಿರೀಕ್ಷಣದಿಂ ಕಾಲಮಂ ಕಳೆವುದಱಿನೇಂ?

**ಸೂತಂ**—(ಬಿಸವಂದದಿಂ ಮೇಣ್ ದುಗುಡದಿಂ) ಆಯುಷ್ಮಂತನೆ! ಸೈರಿಸು ಸೈರಿಸು; ಸಾಲ್ಗುಂ. ಇಂತು ವರ್ತಿಪುದಾಗದು.

**ದುರ್ಯೋಧನಂ**—ಚಿಃ ಸೂತ! ರಥದಿಂದೇಂ? ಸೆರಗಂಬೆರಗಂ ಪಾರದೆ ಶತ್ರುಸಮ್ಮರ್ದದಲ್ಲಿ ಮುಂಬರಿದು ಪಳಂಚಿ ನಡೆವ ಸುಯೋಧನನಲ್ತೆ ನಾಂ?

**ಸೂತಂ**—ಆಯುಷ್ಮಂತನೆ! ಇದಪ್ಪುದು; ಸಂದೆಯಮೇಂ?

**ದುರ್ಯೋಧನಂ**—ಅಪ್ಪೊಡದೇಕೆ ನೀನಿಂತು ನುಡಿವೆ? ನೋಡು-

ಇದಿರೊಳ್ ನಾನಿರೆ ಪಾಪಿ ಮಾರುತಿಯಿವಂ ಕೈಕೊಂಡು ಕೈದಂ ಸ್ವಭಾ | ವದಿನೌದ್ಧತ್ಯಮನಾಂತ ವತ್ಸನನಳುಂಬಂ ಹಿಂಸಿಸುತ್ತಿರ್ದಪಂ||
ಸದೆಯಲ್ಕಿಂತಹನಂ ಪ್ರವರ್ತಿಸಿದನಂ ನನ್ನಂ ನಿವಾರಿಪ್ಪೆಯೋ | ನಿದು ಕೋಪಂ ನಿನಗಿಲ್ಲಮೋ ಕರುಣೆಯಿಲ್ಲೇನಿಲ್ಲಮೋ ಲಜ್ಜೆಯುಂ ||

**ಸೂತಂ**—ಆಯುಷ್ಮಂತನೆ! ನೀಚಭೀಮಸೇನಂ ಸಂಪೂರ್ಣ ಪ್ರತಿಜ್ಞನಾಗಿ ಮರಲ್ದನಕ್ಕುಂ.

**ದುರ್ಯೋಧನಂ**—(ಥಟ್ಟನೆ ಕೆಳಗೆ ಬೀೞುತ್ತೆ) ಹಾ ವತ್ಸ! ದುಶ್ಶಾಸನ! ಹಾ! ಎನ್ನ ಬೆಸದಿಂ ಪಾಂಡವರೊಡನೆ ಪಗೆದವನೇ! ಹಾ!

ಪನ್ನತಿಕೆಯೊಳೊಂದಱೊಳ್ ಅಕ್ಕಱುಳ್ಳವನೆ! ಹಾ! ಎನ್ನ ತೊಡೆಗಳೊಳ್ ಲಾಲಿತನಾದವನೇ! ಹಾ! ರಿಪುಕುಲಮೆಂಬಾನೆವಿಂಡಿಂಗೆ ಮಾಸಿಂಗವೆನಿಸಿದವನೆ! ಹಾ! ಯುವರಾಜನೆ! (ಎಂದು ನೀಡುಂ ಬಿಸುಸುಯ್ದು)

ಎನಸುಂ ಲಾಲಿತನಾದೆಯುಗ್ರಜನೆನಿಪ್ಪೆನ್ನಿಂದೆ ನೀನಾದೊಡಂ |
ಮನವೊಲ್ವಂತುಪಭೋಗ್ಯಸೌಖ್ಯಚಯದೊಳ್ ದಲ್ ಸೇರ್ದೆಯಿಲ್ಲಾವಗಂ ||
ನಿನಗೀಗಳ್ ಪುದಿದೀವಿಪತ್ತಿಗೆ ವಲಂ ನಾನೇ ಗಡಾ ಮೂಲಮೇ |
ಕೆನೆ ಪೊಲ್ಲಂ ಗೆಯಿಸಿಟ್ಟೆನಾನಣುಗ ನಿನ್ನಂ ಕಾದೆನಿಲ್ಲಕ್ಕಟಾ ||೧೧೧|| (ಎಂದು ಬೀೞ್ವಂ)

**ಸೂತಂ**—ಆಯುಷ್ಮಂತನೆ! ಸಮಾಧಾನವೊಂದು; ಸಮಾಧಾನವೊಂದು. ಇದು ಶೋಕಿಸಲ್ ತಕ್ಕ ಪೊೞ್ತೇ?

**ದುರ್ಯೋಧನಂ**—ಚೀಃ ಸೂತ! ನೀಂ ಗೈದುದೇಂ?

ಅನವರತಂ ರಕ್ಷಿಸಲರು |
ಹನನೆಳೆಯನನೆನ್ನ ಬೆಸನನನುವರ್ತಿಪನಂ ||
ಅನುಜನನವನಂ ದುಶ್ಶಾ |
ಸನನಂ ಬಲಿಯಿತ್ತು ರಕ್ಷಿಸಿದೆ ನೀನೆನ್ನಂ ||೧೧೨||

**ಸೂತಂ**—ಮಹಾರಾಜನೆ! ಮಹಾರಥರ್ ವರ್ಷಿಸಿದ ಮರ್ಮಭೇದಕಂಗಳಿಂ ಬಾಣತೋಮರಶಕ್ತಿಪ್ರಾಸಂಗಳಿಂ ಮಹಾಪ್ರಭು ಹಮ್ಮದಂಬೋಗಿ ಚಲನೆಯಿಲ್ಲದಿರ್ಪಿನಂ, ನಾಂ ರಥಮನಿತ್ತಣ್ಗೆ ಉಯ್ದೆಂ.

**ದುರ್ಯೋಧನಂ**—ನೀನಸಂಗತಂಗೆಯ್ದೆ; ಏಕೆನೆ—

ಮದನುಜವೈರಿಯುಂ ಪಶುವುಮಾದ ವೃಕೋದರನಾಂತ ವಜ್ರದಂ |
ದದ ಗದೆಯಾ ವಿಘಟ್ಟನದಿನೆಟ್ಟಱನೊಂದಿದೆನಿಲ್ಲಮಾಗಳಾಂ ||
ವಿದಳಿತನಾಗಿ ನನ್ನ ಸಹಜಂ ಮಲಗಿರ್ಪ್ಪಸೃಗಾರ್ದ್ರಮಾದ ತ |
ಳ್ಪದೆ ನೆಱ ಪಟ್ಟೆನಿಲ್ಲ ಗಡ ಭೋಂಕನೆ ಮಾರುತಿ ಪಟ್ಟನಿಲ್ಲ ಮೇಣ್ ||

(ನೀಡುಂ ಸುಯ್ದು ಆಗಸಮನೀಕ್ಷಿಸಿ) ಎಲೆ ಭರತಕುಲವಿಮುಖ ಹತವಿಧಿಯೆ !

ಎನಗಕ್ಕೆಮೃತಿಯಾದೊಡ |
ಮನಿಲಾತ್ಮಜನಿಂದಮಾಗದಿರ್ಕೆಮ ಹನನಂ ||

**ಸೂತಂ**— ಪಾಪಂ ಶಾಂತಮಕ್ಕೆ; ಪಾಪಂ ಶಾಂತಮಕ್ಕೆ. ಅಮಂಗಲಂ ಪ್ರತಿಹತಮಕ್ಕೆ; ಅಮಂಗಲಂ ಪ್ರತಿಹೃತಮಕ್ಕೆ. ಮಹಾರಾಜನೆ! ಇದೇಂ?

**ದುರ್ಯೋಧನಂ**—

ಎನಗೆ ಹತಾಖಿಲಬಾಂಧವ |
ಜನಂಗದೇಂ ರಾಜ್ಯದಿಂದಮೇಂ ಜಯದಿಂದಂ ||೧೧೪||

(ಬಟ್ಟೆಕೆ ಪ್ರಹಾರದಿಂದೇಱುಗೊಂಡ ಸುಂದರಕನೆಂಬಂ ಪುಗುವಂ)

**ಸುಂದರಕಂ**—ಎಲೆ ಆರ್ಯರಿರಾ! ಸಾರಥಿಸಮೇತನಂ ಮಹಾರಾಜದುರ್ಯೋಧನನಂ ನೀವಿತ್ತಲ್ ಕಂಡಿರೇಂ? (ಕಿಱುಪೊಟ್ತು ಉಸಿಕಮಿರ್ದ್ದು) ಇದೇಂ ಒರ್ವನುಂ ನುಡಿಯಂ? ಅಕ್ಕೆ; ಇತ್ತಲ್ ಬದ್ಧ ಪರಿಕರರಾಗಿ ನಿಂದ ಕೊರ್ವಿದ ಮೆಯ್ಯುಳ್ಳ ಪುರುಸರ ನೆರವಿ ಕಾಣ್ಗುಂ. ಇತ್ತಲೆಯ್ದಿ ಬೆಸಗೊಂಡಪೆಂ (ನೋಡಿ) ಇದೇಂ? ಇವಂದಿರ್ ತಮ್ಮಾಣ್ಮನ ಎರ್ದೆಯೊಳ್ ಗಾಢಪ್ರಹಾರದಿಂ ನಟ್ಟು ಮಹಾಪ್ರಯತ್ನದಿಂದಮುಂ ಪಿಡಿದೆೞೆಯಲಾಗದ ತುದಿಯುಳ್ಳ ಕೂರಲಗುಗಳಂ ಇಕ್ಕುಳ್ಗಳಿಂ ಕೀಱುತಿರ್ದ್ದಪರ್; ಅದಱಿನಿವರಱಿಯರ್. ಅಕ್ಕೆ; ಪೆಱತೊಂದೆಡೆಯೊಳಱಸುವೆಂ (ಪೆಱತೊಂದೆಡೆಯೊಳೀಕ್ಷಿಸಿ) ಇವರ್ ಪೆಱರ್ ಕಡುಮುತ್ತರ್ ಮಾನಸರ್. ಆದುದಱಿನಿತ್ತ ಸಾರ್ದು ಬೆಸಗೊಳ್ವೆಂ. (ಬೞಿಸಾರ್ದು) ಹುಂ! ಎಲೆಜನಂಗಳಿರಾ! ಕೌರವೇಂದ್ರನೆಲ್ಲಿರ್ದ್ದಪಂ? ಇದೇಂ ಅೞ್ತಪರ್? (ಆಲೋಕಿಸಿ) ಅಕಟಕಟಾ! ಇಲ್ಲಿ ಬಹುಕಷ್ಟಮೊದವಿರ್ಕುಂ. ಮಾತೆಯಿವಳ್ ತನ್ನ ಕುವರಂ ಬವರದೊಳ್ ಹತನಾದನೆಂಬುದಂ ಕೇಳ್ದು

ತಾನುಂ ಅಲಂಕಾರಭೂಷಿತೆಯಾದ ಕಿಱುವರಯದ ಸೊಸೆಯೊಡನೆ ಮಡಿಯಲ್ಕೆ ತೊಡಗಿಪ್ಪರ್ಳ್ (ತಲೆದೂಗಿ) ಸಾಧು, ವೀರಜನನಿ! ಸಾಧು. ನೀಂ ಮಱುವುಟ್ಟಿನೊಳ್ ಪುತ್ರನಟೀವಂ ಕಾಣದಿರ್ಪೆ. ಅಕ್ಕೆ, ಪೆಱತೊಂದೆಡೆಯೊಳಱಸುವೆಂ (ಪೆಱತೊಂದೆಡೆ ನೋಡಿ) ಇಲ್ಲಿ ಪೆಱತೊಂದು ಯೋಧರನೆರವಿ ಮೆಯ್ಯೊಳ್ ಪೊಯ್ಲ್ಗಳನನುಭವಿಸಿ ಏಱುಗಳ್ಗೆ ಚಿಕಿತ್ಸೆಯನೇನುಮಂ ಗೆಯ್ಯದೆಯೆ, ಆರೋಹಕಶೂನ್ಯಾಸನಮುಂ ತುರಂಗಮುನಿದಂ ಪಿಡಿದಱುತಿರ್ಕ್ಕುಂ. ನಿಕ್ಕುವವಿಾಜೋದರೊಡೆಯುಂ ಇಲ್ಲಿಯೆ ಹತನೆನಿಸಿದನಕ್ಕುಂ. (ಸುತ್ತಲುಮುವಲೋಕಿಸಿ) ಇದೇನಿವರೆಲ್ಲರುಂ ತಂತಮಗೆ ತಕ್ಕನೋವನನುಭವಿಸುತ್ತುಂ ಅದೃಷ್ಟಹೀನತೆಯಿಂ ಬಾಗುಳೊಂದಿಪ್ಪರ್? ಆದುದಱಿಂದಿತ್ತಲಾರಂ ಬೆಸಗೊಂಡಪೆಂ? ಆರೆಡೆಗೆಯ್ದುವೆಂ? ಆಃ! ಎಲೆ ನಿರ್ಭಾಗ್ಯರಿರಾ! ಪನ್ನೊಂದಕ್ಷೋಹಿಣಿಗಳೊಡೆಯನಂ ನೂರ್ವರ್ ಸೋದರ್ಯರ ಪಿರಿಯನಂ ಭೀಷ್ಮದ್ರೋಣಕೃಪಕೃತವರ್ಮಾಶ್ವತ್ಥಾಮರ ಪೋಷಕನಂ ಮಹಾರಾಜದುರ್ಯೋಧನನುಮಂ ಅಱಸುವಂತಾಯ್ತು. ಆತನೆಲ್ಲಿರ್ದ್ದಪನೋ ಅಱಿಯೆಂ. ಮೇಣ್ ಈವಿಷಯದೊಳ್ ದೈವಮನೇಕೆ ಪಟೀಯುವೇಳ್ಕುಂ? ಇದು—ವಿದುರವಚನದ ತಿರಸ್ಕಾರಮೆಂಬ ಬಿಱ್ತುವಂ, ಭೀಷ್ಮರೆಸಗಿದ ಹಿತೋಪದೇಶದ ನಿರಾಕರಣಮೆಂಬ ಅಗೆಯುಂ ಪಡೆದು, ದುಷ್ಟಶಕುನಿಯ ಪ್ರೋತ್ಸಾಹಮೆಂಬ ಬೇರ್ ಸಮಂತು ನಾಂಟಿರೆ, ಬೇರಮೆಂಬಾಲವಾಲಂ ಚಿರಕಾಲದಿಂ ಪರಿಪೋಷಂಬಡೆಯುತಿರೆ, ದ್ರೌಪದೀಕೇಶಗ್ರಹಣಮೆಂಬ ಪೂವಿನಿಂ ಕೂಡಿ ಬಳೆದ ಜೂದೆಂಬ ವಿಷವೃಕ್ಷದ ಫಲಂ. (ಬೇಱೊಂದೆಡೆ ನೋಡಿ) ಇದಿತ್ತಲ್ ತರತರದ ರನ್ನಂಗಳ ಪೊಳೆಪು ನೇಸರ್ಗದಿರ್ಗಳೊಡವೆರೆದು ತೊಳತೊಳಗುತಿರೆ, ದೆಸೆದೆಸೆಗಳೊಳ್ ಸಾಸಿರಂದಿರವಿಲ್ಗಳನೊಡಚ್ಚುರ್ಗುಮೆಂಬಂತೆ ಪರಿಶೋಭಿಪುದುಂ, ಭಗ್ನಮಾದುದಱಿಂ ಪಟವಿಗೆಯ ದಂಡಮಿಲ್ಲದುದುಮಾದ ರಥಂ ಕಣ್ಗೆ ಕಾಣ್ಗುಂ; ಆದುದಱಿನೆನಗಿಂತು ತೋಱುಗುಂ—ನಿಕ್ಕುವವಿಾಮು

ಮಹಾರಾಜದುರ್ಯೋಧನನ ವಿಶ್ರಾಂತಿಸ್ಥಾನಮಕ್ಕುಂ. (ಶನಿಹವೆಯ್ದಿ ಮತ್ತಂ ನೋಡಿ) ಮಹಾರಾಜಂಗೆ ಜಯಮಕ್ಕೆ.

**ಸೂತಂ**—(ನೋಡಿ) ಆಯುಷ್ಮಂತನೆ! ರಣರಂಗದತ್ತಣಿಂ ಸುಂದರಕನೆಯ್ದಿ ಪ್ಪಂ.

**ದುರ್ಯೋಧನಂ**—(ನೋಡಿ) ಎಲೆಸುಂದರಕ! ಅಂಗರಾಜಂಗೆ ಕುಶಲಮೆ?

**ಸುಂದರಕಂ**—ಮಹಾಪ್ರಭುವೆ! ಶರೀರಮಾತ್ರದಿಂದೆ ಕುಶಲಂ.

**ದುರ್ಯೋಧನಂ**—(ಸಂಭ್ರಾಂತನಾಗಿ) ಏಂ ಪಾರ್ಥಂ ಈತನ ರಥಾಶ್ವಂಗಳಂ ಕೊಂದನೋ? ಸಾರಥಿಯುಂ ಸದೆದನೋ? ರಥಮಂ ಭಂಗಂಗೊಳಿಸಿದನೋ?

**ಸುಂದರಕಂ**—ಮಹಾರಾಜನೆ! ಈತನ ರಥಮನೇ ಭಂಗಂಗೊಳಿಸಿದನಿಲ್ಲಂ; ಮನೋರಥಮುಮಂ.

**ದುರ್ಯೋಧನಂ**—ಎಲೆಸುಂದರಕ! ಮೊದಲೆ ಪರ್ಯಾಕುಲಮಾದೆನ್ನ ಮನಮಂ ಮತ್ತಮಸ್ಪಷ್ಟೋಕ್ತಿಗಳಿಂದಿಂತೇಕೆ ನೀನಾಕುಲಿಪೆ? ಅದನೆಲ್ಲಮುಮಂ ಸ್ಪಷ್ಟಮಪ್ಪಿನಂ ಪೇೞ.

**ಸುಂದರಕಂ**—ಮಹಾರಾಜನಾಲಿಪುದು; ಕುಮಾರದುಶ್ಶಾಸನನ ಸಂಹಾರದಿಂ (ಎಂದರ್ಧೋಕ್ತಿಯೊಳ್ ಮೊಗಂದಿರಿಪುವಂ.)

**ಸೂತಂ**—ಸುಂದರಕ! ಪೇೞ್. ದೈವಮೆ ಪೇೞ್ದುದು.

**ದುರ್ಯೋಧನಂ**—ಪೇೞ್; ಆಂ ಕೇಳ್ದಪ್ಪೆವು.

**ಸುಂದರಕಂ**—ಮಹಾರಾಜನೆ! ಕೇಳ್. ಈಗಳ್ ದುಶ್ಶಾಸನನ ಸಂಹಾರದಿಂ ಕನಲ್ದ ಸ್ವಾಮಿಯುಂಗರಾಜಂ ನೊಸಲೊಳ್ ಭೀಕರಮಂ ಪುರ್ವಂಗಂಟಿಂ ತಾಳ್ದು, ತುಡುವುದುಂ ಬಿಡುವುದುಂ ಅಱಿಯಲರಿದೆಂಬಿನಂ ಎಡೆವಿಡದೆ ಶರಲ್ಗಳಂ ವರ್ಷಿಸುತ್ತೆ, ಆರ್ಜುನಂ ನೋೞ್ಪಿನಂ ದುರುಳನಂ ಆನೀಚಭೀಮಸೇನನಂ ಇದಿರ್ಚಿದಂ.

**ದುರ್ಯೋಧನಂ**—ಬೞಿಕೆ ಬೞಿಕೆ ?

**ಸುಂದರಕಂ**—ಬೞಿಕೆ ಸಿಂಹನಾದಮಂ ಪೋಲ್ವ ಓರೊರ್ವ್ವರ ಗರ್ಜನಮೇ ಸೂಚಕಮಾಗಿರ್ಪ್ಪಿನಂ, ಬಿಟ್ಟ ಬಗೆವಗೆಯ ಕೈದುಗಳಿಂ ಪಳಂಚಿದ ಮಿಂಚುಗಳ ಪೊಳೆಪುಗಳಿಂ ಮಿಱುಗುತ್ತುಂ ಗಂಭೀರಮುಂ ಮೊೞಗನೊಳಕೊಂಡ ಬಿಲ್ಮುಗಿಲ್ಗಳ್ ಕಱೆವ ಶರಧಾರಾವೃಷ್ಟಿಯಿಂ ನಿರಿಕಿಸಲಸದಳಮಾದ ಜುದ್ದಮೆಂಬ ದುರ್ದ್ದಿನಂ ಆವರ್ಗ್ಗರ್ವ್ವರ್ಗ್ಗಂ ಒದವಿದತ್ತು.

**ದುರ್ಯೋಧನಂ**—ಬೞಿಕಂ ಬೞಿಕಂ ?

**ಸುಂದರಕಂ**—ಬೞಿಕಮಿನಿತಱೊಳ್ ತನ್ನಣ್ಣಂಗೆ ಸೋಲಾದಪುದೆಂಬ ಶಂಕೆಯಿಂ ಸವ್ಯಸಾಚಿ ತನ್ನ ಪೞವಿಗೆಯ ತುದಿಯೊಳಿರ್ಪ್ಪ ಕೋಡಗಂ ಸಿಡಿಲ್ಮಸಗಿತ್ತೆಂಬಿನಮುರ್ಬ್ಬಿ ಬೊಬ್ಬಿಱಿಯುತಿರೆ, ಮೇಣ್ ಶಂಖಚಕ್ರಗದಾಸಿಗಳಿಂ ಚಿಹ್ನಿತಂಗಳಾದ ವಾಸುದೇವನ ನಾಲ್ಕುಂ ನಿಡುದೋಳ್ಗಳ್ ಕೊರ್ವ್ವಿ ದುಱುದುಂಬಿಗಳೆನಿಸಿದ ಕುದುರೆಗಳಂ ಬಸಕೆಕೊಳ್ವುದಱೊಳ್ ತೊಡಗಿರೆ, ಮತ್ತಂ ಪತ್ತುದೆಸೆಗಳ್ ಪಾಂಚಜನ್ಯದೇವದತ್ತಂಗಳ ತಾರಧ್ವನಿಯಿಂ ತೆಕ್ಕನೆ ತೀವಿ ಘೋರೆಂದು ಘೋರ್ಗ್ಗರೆಯುತಿರೆ, ತೊಳತೊಳಗುವ ತನ್ನ ಮಹಾರಥಮಂ ಆತಾಣಕೆ ಘೋಂಕನೆ ಪರಿಯಿಸಿದಂ.

**ದುರ್ಯೋಧನಂ**—ಬೞಿಕ್ಕೆ ಬೞಿಕ್ಕೆ ?

**ಸುಂದರಕಂ**—ಬೞಿಕ್ಕೆ ಭೀಮಾರ್ಜುನರಿರ್ವ್ವರುಂ ತನ್ನಯ್ಯಂಗೆ ಅಂಗರಾಜಂಗೆ ಇದಿರ್ಚ್ಚಿ ನಿಲ್ವುದುಂ, ಕಂಡು ಕುಮಾರವೃಷಸೇನಂ ಸಂಭ್ರಮವಶದಿಂ ಜಗುಳ್ದ ರನ್ನಸೀಸಕಮಂ ತೆಗೆದಿಟ್ಟು, ತೆಗೆನೆಱೆದು ಬಿಱುವಿಲ್ದಿರುವಂ ಜೇವಡೆದು ಬಲಗೈಯಿಂದೆ ಮೇಲೆತ್ತಿದ ಬಾಣಪುಂಖಂಗಳಿಂ ವಿಘಟ್ಟಿಸಿ ಸಾರಥಿಯಂ ತ್ವರೆಗೊಳಿಸುತ್ತುಂ ಆತ್ತಣ್ಗೆ ಬಂದಂ.

**ದುರ್ಯೋಧನಂ**—ಬೞಿಕ್ಕಂ ಬೞಿಕ್ಕಂ ?

**ಸುಂದರಕಂ**—ಬೞಿಕ್ಕಂ ಪ್ರಭುವೆ! ಕುಮಾರವೃಷಸೇನಂ ತಾಂ, ಬಪ್ಪಾರ್ಗಳೆ ವಿದಳಿತೇಂದ್ರನೀಲಂಬೋಲ್ ನೀಲವರ್ಣದಿಂದಿಡಿದ ನುಣ್ಪುವೆತ್ತ ಪಿಳ್ಕುಗಳನಾಂತುವುಂ, ಕಟ್ಟಿದ ಬಿಱುಗಱುಗಳಿಂ ಮೊಗದೊಳ್ ಕಪ್ಪುಗೊಂಡುವುಂ, ಶಿಲೆಯೊಳ್ ಮಸೆದು ಕೂರ್ಪುಗೊಳಿಸಿದ ಕಾರಲಗುಗಳನೊಳಕೊಂಡುವುಂ ಆದ ಸರಲ್ಗಳಿಂ ಅರ್ಜುನನ ತೇರಂ ಪೂತ ಮರನೆಂಬಿನಂ ಚಣದೊಳ್ ಬಾಸಣಿಸಿದಂ.

**ದುರ್ಯೋಧನಂ**—(ಸಂತಸದಿಂ) ಬೞಿಯುಂ ಬೞಿಯುಂ ?

**ಸುಂದರಕಂ**—ಬೞಿಯುಂ ಕಟ್ಟೊಡೆಯ! ಅರ್ಜುನಂ ಭೋಂಕನೆ ತುಡುವ ಕೂರಂಬುಗಳಿಂ ಎಚ್ಚು ಮಱುವಕ್ಕದ ಸರಲ್ಮೞೆಯುಂ ವಿದಳಿಸುತೆ ನಸುನಕ್ಕು, "ಎಲಗೆ ವೃಷಸೇನ! ನಿನ್ನಯ್ಯನುಮೆನ್ನಿದಿರೊಳ್ ನಿಲಲಾಱಂ; ಇಂ ಪಸುಳೆ ನೀಂ ನಿಲ್ಪುದೆಂದೊಡೇಂ? ಅದಱಿಂ ತೆರಳ್ ಪೆಱರಪ್ಪ ತರಳರೊಡನೆ ಪೊಣರಲ್" ಎಂದಂ ಇಂತು ಗುರುಜನಮನಧಿಕ್ಷೇಪಿಸಿದುದಂ ಕೇಳ್ದು ಕುಮಾರವೃಷಸೇನಂ ಕನಲ್ಕೆಯಿಂ ಕೆಂಪೇಱಿದ ಬಟ್ಟಮೊಗದೊಳ್ ಮಸಗಿದ ಪುರ್ವುಗಂಟೆನಿಂದಗುರ್ವಿಸುತೆ ಬಿಲ್ಲಂ ಪಿಡಿದು ತೆಗೆನೆಱೆದ ಮರ್ಮಭೇದಕಂಗಳಿಂ ಬಿಱುಸರಲ್ಗಳಿಂದಮೆ ಧನಂಜಯನಂ ಧಿಕ್ಕರಿಸಿದನಲ್ಲ ಕಿಡುನುಡಿಗಳಿನಲ್ತು.

**ದುರ್ಯೋಧನಂ**—ಸಾಧು, ವತ್ಸ ವೃಷಸೇನ! ಸಾಧು. ಬೞಿಕೆ ಬೞಿಕೆ ?

**ಸುಂದರಕಂ**—ಬೞಿಕೆ, ಸ್ವಾಮಿಯೆ! ಕೂರಂಬುಗಳಿಸುಗೆಯು ನೋಯಿಂಗೆ ಕನಲ್ದು ಗಾಂಡೀವಿ ಸಿಡಿಲಡಸಿದಂತೆ ಮಸಗಿದ ಚಂಡಗಾಂಡೀವದ ಟಂಕಾರದಿಂದಮುಂ ಸರಲ್ಗಳಿಸುಗೆಯಿಂದಮುಂ, ಕೇಳಲುಂ ನೋಡಲುಮರಿದಪ್ಪಂತೆ ಗೆಯ್ದು ತನ್ನ ಬಿಜ್ಜೆಯ ಕಲ್ಪಿಗಂ ಬಲ್ಪಿಂಗಂ ತಕ್ಕುದೆನೆ ಬಿಸವಂದದಮನಾಗಿಸಿದಂ.

**ದುರ್ಯೋಧನಂ**—(ಅಭಿಪ್ರಾಯಂಬೆರಸು) ಬೞಿಕ್ಕೆ ಬೞಿಕೆ ?

**ಸುಂದರಕಂ**—ಬೞಿಕ್ಕಾಣ್ಮನೆ ! ಆಪಗೆಯ ಅನುವರಗೆಯ್ತದ ಚದುರನದಂ ಕಂಡು ಚದುರಂ ಕುಮಾರವೃಷಸೇನಂ ಆರುಮಱಿಯ ಲರಿದೆಂಬಿನಂ ಡೊಣೆಮೊಗದೊಳಂ ತಿರುವಿನೊಳಂ ಪೋಪ ಬರ್ಪ ತುಡುವ ಬಿಡುವ ಕೈಯ ಚಳಕದಿಂ ಕೂಡಿ ಮಿಗಿಲೆನೆ ಪೋರ್ದಂ.

**ದುರ್ಯೋಧನಂ**—ಬೞಿಕಂ ಬೞಿಕಂ ?

**ಸುಂದರಕಂ**—ಬೞಿಕಮರಸನೆ ! ಕೌರವಪಾಂಡವಬಲಂಗಳೊಳೆರಡರೊಳಂ ನೆರೆದ ಬೀರರ ನೆರವಿ ಪೋಣರ್ವುದಂ ನಿಲಿಸಿ, ಚಿರಕಾಲ ಪ್ರವೃತ್ತಮಾದ ಪಗೆತನಮುನುೞಿದು, ಸಾಧು, ವೃಷಸೇನ ! ಸಾಧು— ಎಂದು ಕೋಲಾಹಲಂಗೆಯುತೆ ಪೊಗೞಲ್ಕೆ ತೊಡಗಿದತ್ತು.

**ದುರ್ಯೋಧನಂ**—(ಅಚ್ಚರಿವಟ್ಟು)ಬೞಿಕ್ಕೆ ಬೞಿಕ್ಕೆ ?

**ಸುಂದರಕಂ**—ಬೞಿಕ್ಕೆ ಮಾಪ್ರಭೂ ! ಬಿಲ್ಗಾಱರನೆಲ್ಲರನಲ್ಲಗಳೆವಂತಪ್ಪ ಸಾಸದಿನೊಪ್ಪುವ ತನ್ನೆಳೆಯನ ಆತೆಱದ ಕಾರ್ಯಾರಂಭಮಂ ಕಂಡು ಹರ್ಷರೋಷಶಂಕೆಗಳಿಂ ಕೂಡಿದಂ ಒಡೆಯನಂಗರಾಜಂ ಭೀಮಸೇನನ ಮೇಲೆ ಬಾಣವೃಷ್ಟಿಯುಮಂ ಕುಮಾರವೃಷಸೇನನ ಮೇಲೆ ಕಣ್ಬನಿವೆರಸಿದ ದೃಷ್ಟಿಯುಮಂ ಬೀೞಿಸಿದಂ.

**ದುರ್ಯೋಧನಂ**—(ಚಕಿತನಾಗಿ) ಬೞಿಯುಂ ಬೞಿಯುಂ ?

**ಸುಂದರಕಂ**—ಬೞಿಯುಂ ಪ್ರಭುವೆ ! ಅರ್ಜುನಂ ಇರ್ಪೆಡೆಯೊಳಂ ಪೊಣ್ಮಿದ ಕೊಂಡಾಟದ ನುಡಿಗಳನಾಲಿಸಿ ಕನಲ್ದು, ಕುದುರೆಗಳ್ ಸಾರಥಿ ಮಾರಥಂ ತಿಱು ಬಿಲ್ ರಾಯುಗುಱುಪೆನಿಸಿದ ಬೆಳ್ಗೊಡೆಯೆಂಬಿವಱ ಮೇಲೆಯುಂ ಕುಮಾರವೃಷಸೇನನ ಮೇಲೆಯುಂ ಏಕಕಾಲದೊಳಂಬುಗಳನಳುಂಬಂ ನಿಗುಂಬಿಸಿದಂ.

**ದುರ್ಯೋಧನಂ**—ಅನಂತರಮನಂತರಂ ?

**ಸುಂದರಕಂ**—ಅನಂತರಮವಾಣ್ಮನೆ ! ಕುಮಾರಂ ರಥಹೀನನುಂ ಛಿನ್ನಗುಣಕೋದಂಡನುಂ ಆಗಿ ಸುತ್ತಲುಂ ಸುತ್ತುವುದಱಿಂದಮೇ ಸರಂಗಳಿಸುಗೆಗೆ ಸಿಲ್ಕದೆ ಮಂಡಲಾಕಾರದಿಂ ಚರಿಸಲಾರಂಭಿಸಿದಂ.

**ದುರ್ಯೋಧನಂ**—(ಶಂಕೆಗೊಂಡು) ಬೞಿಯಂ ಬೞಿಯಂ ?

**ಸುಂದರಕಂ**—ಬೞಿಯಂ ಕುಮಾರನ ರಥಮಂ ಭಂಗಿಸಿದನೆಂದು ಕ್ರೋಧದಿಂ ಪಜ್ವಳಿಪ ಸ್ವಾಮಿಯಂಗರಾಜಂ ತನ್ನಿದಿರೊಳ್ ಭೀಮಸೇನಂ ಪೋರುತೆ ನಿಂದಿರ್ದೊಡಂ ಲಕ್ಕಿಸದೆ ಅರ್ಜುನನ ಮೇಲೆ ವಿಶಿಖಂಗಳನೆಡೆವಿಡದೆ ವರ್ಷಿಸಿದಂ. ಕುಮಾರವೃಷಸೇನನುಂ ಪರಿಜನಂ ತಂದು ಸಜ್ಜುಗೆಯ್ದ ಪೆಱತೊಂದಂ ರಥಮಂ ಪತ್ತಿ ಮತ್ತಮರ್ಜುನನೊಡನೆ ಪೋಣರಲ್ ತೊಡಗಿದಂ ಮತ್ತಮಿಂತೆಂದಂ—ಎಲೆಎಲೆ ನೀಚ ! ಎನ್ನಯ್ಯನನಧಿಕ್ಷೇಪಿಸಿ ಗೞಪುವ ನಡುವಣ ಪಾಂಡವ ! ಎನ್ನ ಕಣೆಗಳ್ ನಿನ್ನೊಡಲನುೞಿದು ಮತ್ತೆಲ್ಲಿಯುಂ ಬೀೞವು.

ಎಂದು ಪೇೞ್ದು ಪಲಸಾಸಿರ ಸರಲ್ಗಳಿಂದೆ ಅರ್ಜುನನ ಕಳೇಬರಮಂ ಮುಸುಂಕಿದಂ. ಮತ್ತಂ ಸಿಂಹನಾದಂಗೈದಂ.

**ದುರ್ಯೋಧನಂ**—(ಬೆಱಗುವಟ್ಟು) ಮುಗ್ಧಭಾವದೊಳ್ ಎಳೆಯನದಟು ಅಚ್ಚರಿಯನೊಡರಿಕುಂ. ಬೞಿಕಂ ಬೞಿಕಂ ?

**ಸುಂದರಕಂ**—ಬೞಿಕಂ ಸ್ವಾಮಿಯೆ ! ಅರ್ಜುನಂ, ಕುಮಾರಂ ವರ್ಷಿಸಿದ ಸಾಸಿರಂಬುಗಳುಮಂ ಕಡೆಗಣ್ಚಿ ಮಿಱುಮಿಱುಗುವ ಪೊಂಗಿಱುಗಂಟೆಗಳ ಝಣಝಣತ್ಕಾರದಿಂ ಕೂಡಿ ಮುಗಿಲ್ ಮುಸುಂಕದ ಬಾನಂತೆ ನಿರ್ಮಳಮೆನಿಸಿ ಇಂದ್ರನೀಲಮಣಿಯಂತೆ ಕರಿದುಂ ನುಣ್ಣಿತುಮಾದ ಮೊಗಮನಾಂತು ತರತರದ ರನ್ನಂಗಳ್ ಪೊಳೆಯೆ ನೋಡಲ್ ರಯ್ಯಮುಂ ಭೀಕರಮುಮಾಗಿ ಪರಿಶೋಭಿಸಿದ ಶಕ್ತಿಯಂ ರಥದ ನಡುವಣಿಂ ತೆಗೆದು ಪರಿಹಾಸಮನೊಡರ್ಚುತೆ ಕುಮಾರನಂ ಗುಱಿಗೈದಿಟ್ಟಂ.

**ದುರ್ಯೋಧನಂ**—(ದುಗುಡಂಗೊಂಡು) ಬಱಿಕಂ ಬಱಿಕಂ ?

**ಸುಂದರಕಂ**—ಬಱಿಕವೊಡೆಯ ! ಸ್ವಾಮಿಯಂಗರಾಜನ ಕೈಯತ್ತಣಿಂ ಬಿಲ್ಲುಂ ಎರ್ದೆಯತ್ತಣಿಂ ವೀರಸುಲಭಮಪ್ಪ ಉತ್ಸಾಹಮುಂ ಕಣ್ಗಳತ್ತಣಿಂ ಪನಿಯುಂ ಬಾಯತ್ತಣಿಂ ದನಿಯುಂ ಜಗುಳ್ದುವು. ಅರ್ಜುನಂ ಬೊಬ್ಬಿಱಿದಂ. ಭೀಮಸೇನಂ ಸಿಂಹನಾದಂಗೆಯ್ದಂ. ಗೆಯ್ಯಲಾಗದೆಸಕವೆಸಗಿದುದೆಂದು ಕುರುಸೈನ್ಯಮೆಲ್ಲಮುಂ ಗೋೞಿಟ್ಟಿತು.

**ದುರ್ಯೋಧನಂ**—(ದುಃಖದಿಂ) ಬಱಿಯಂ ಬಱಿಯಂ ?

**ಸುಂದರಕಂ**—ಬಱಿಯುಮಾಣ್ಮನೆ ! ವೃಷಸೇನನುಂ ಬರುತಿರ್ಪ ಶಕ್ತಿಯನದಂ ನಡುದಾರಿಯೊಳೆ ನೀಡುಂ ನೋಡುತ್ತುಂ ತೆಗೆನೆಱೆದೆಚ್ಚ ಕೂರ್ಗಣೆಯಿಂ, ಭಗವಂತನುಮಾಕಾಂತಂ ಬರ್ಪ ಭಾಗೀರಥಿಯನೆಂತೋ ಅಂತು ಮುಕ್ಕಡಿಗೈದಂ.

**ದುರ್ಯೋಧನಂ**—ಸಾಧು ವತ್ಸ ! ಸಾಧು ಬಱಿಕ್ಕೆ ಬಱಿಕ್ಕೆ ?

**ಸುಂದರಕಂ**—ಬಱಿಕ್ಕೆ ಸ್ವಾಮಿಯೆ ! ಅನಿತಱೊಳ್ ತಱಿಲಾಳ್ಗಳ್ ಬೊಬ್ಬಿಱಿದುಗ್ಗಡಿಸಿದ ಶ್ಲಾಘಾವಚನದಿಂ ಮುಚ್ಚಿತು ಕಾಳೆಗವೞಿಗಳ ಸಬ್ದಂ ; ಮತ್ತಂ ಬಾಸಣಿಸಿತು ಸಿದ್ಧರುಂ ಚಾರಣರುಂ ನೆರೆದು ವರ್ಷಿಸಿದ ನಱುವೂಗಳ ಗಡಣದಿಂ ರಣಾಂಗಣಂ.

**ದುರ್ಯೋಧನಂ**—ಅನಂತರಮನಂತರಂ ?

**ಸುಂದರಕಂ**—ಅನಂತರಮಾಣ್ಮನೆ ! ಸ್ವಾಮಿಯಂಗರಾಜನಿಂತೆಂದಂ—“ ಎಲೆ ಬೀರ ಭೀಮಸೇನ ! ಎಮ್ಮಿರ್ವರ ಬವರಮಿನ್ನುಂ ಕೊನೆಗಂಡುದಿಲ್ಲಂ. ನೀನೆನ್ನ ಮಾತಿಂಗೊಪ್ಪು ; ವತ್ಸನ ಮೇಣ್ ನಿನ್ನನುಜನ ಧನುರ್ವೇದಶಿಕ್ಷಾಚಾತುರ್ಯಮನೊರ್ಚಣಂ ನೋೞ್ಪಂ. ನೀನುಂ ನೋಡತಕ್ಕುದಿದು ” ಎಂದು.

ಬಱಿಕಂ ಭೀಮಸೇನಾಂಗರಾಜರಿರ್ವರುಂ ಪೊಣರ್ಕೆಯ ನಿರ್ಬಂಧಮನುೞಿದು ಚಣಂ ಪಗೆತನಮಿಲ್ಲದೆ ನೋಡುತ್ತುಂ ಉಪಶಾಂತರಾಗಿದ್ದರ್.

**ದುರ್ಯೋಧನಂ**—(ಅಭಿಪ್ರಾಯಂಬೆರಸು) ಆಯ್ತು ; ಬಟಿಕೆ ಬಟಿಕೆ ?

**ಸುಂದರಕಂ**—ಬಟಿಕೆ ಪ್ರಭುವೆ! ಇನಿತಱೊಳಗೆ ಶಕ್ತ್ಯಾಯುಧಮಂ ಖಂಡಿಸಿದನೆಂದು ಮಾಮಸಕದಿಂ ಪಜ್ವಳಿಪ ಗಾಂಡೀವಿಯಿದನೆಂದಂ—"ಎಲೆ ದುರ್ಯೋಧನಂ ಮುಂತಪ್ಪ" (ಎಂದರ್ಧೋಕ್ತಿಯೊಳ್ ಭಯಮನಭಿನಯಿಪಂ)

**ದುರ್ಯೋಧನಂ**—ಪೇೞ್ ; ಇದು ಪೆಱರ ನುಡಿ.

**ಸುಂದರಕಂ**—ಮಾರಾಯನಾಲಿಪುದು. "ಎಲೆ ದುರ್ಯೋಧನಂ ಮುಂತಪ್ಪ ಕುರುಕುಲಸೇನಾಪತಿಗಳಿರಾ! ಎಲೆ ಅವಿನಯಜಲಧಿಯ ಕರ್ಣಧಾರನಾದ ಕರ್ಣನೆ! ಮಾರಥರ್ ಮತ್ತಂ ನೀಂ ಸುತ್ತುಂಗೊಂಡು, ಬಾರಿಸಲ್ ಸಾಧ್ಯನಾಗಿಯುಮಿರ್ಪನುಂ ಏಕಾಕಿಯುಂ ಎಳೆಯನುಂ ಆದ ಅಭಿಮನ್ಯುವಂ ನಾನಿದಿರೊಳಿಲ್ಲದಂದು ಕೊಂದಿರ್. ಆನಾದೊಡೆ ನೀಂ ನೋಡುತಿರ್ಪಂದೆ ಈಕುಮಾರವೃಷಸೇನನಂ ಸ್ಮರಣಾವಶೇಷನಂ ಗೆಯ್ದಪೆಂ" ಎಂದು ನುಡಿದು ಬಿಂಕಂಗೊಂಡು, ಸಿಡಿಲ ದನಿಯಂತೆ ಗಂಭೀರಮುಂ ಭಯಂಕರಮುಮಾದ ಟಂಕಾರದಿಂ ಭೋಭೋರೆಂಬ ಗಾಂಡೀವಮಂ ಪೊಯ್ದಪ್ಪಳಿಸಿದಂ, ಸ್ವಾಮಿಯಂಗರಾಜನುಂ ತನ್ನ ಕಾಳಪೃಷ್ಠಮಂ ಸಜ್ಜುಗೆಯ್ದಂ.

**ದುರ್ಯೋಧನಂ**—(ಒಡಲಂ ಪುದುಗಿಸಿ) ಬಟಿಕ್ಕೆ ಬಟಿಕ್ಕೆ ?

**ಸುಂದರಕಂ**—ಬಟಿಕ್ಕೆ ಪ್ರಭುವೆ! ಇನಿತಱೊಳರ್ಜುನಂ ಭೀಮಸೇನನೆಸಗುತಿರ್ದ ಕೊಳುಗುಳಮಂ ಬಾರಿಸಿ, ಅಂಗರಾಜವೃಷಸೇನರ ರಥಂಗಳೆಂಬ ದಡಂಗಳಂ ಪಡಲಿಡಿಪಂಬುದೊಱೆಗಳನೆರಡನೊಡರ್ಚಿದಂ. ಅಂಗರಾಜವೃಷಸೇನರಿರ್ವರುಂ ಪರಸ್ಪರಸ್ನೇಹದಿಂ ತಮ್ಮ ವಿದ್ಯಾನೈಪುಣ್ಯಮಂ ತೋಱುತುಂ ದುರುಳನನರ್ಜುನನನಿದಿರ್ಚಿ ನಿಂದರ್.

**ದುರ್ಯೋಧನಂ**—ಬಟಿಕ್ಕಂ ಬಟಿಕ್ಕಂ ?

**ಸುಂದರಕಂ**—ಬಟಿಕ್ಕಂ ಅತ್ಯುಚ್ಚದಿಂ ಘೋರೆಂಬ ಜೀವಡೆ ಯಿನೊಂದಱನೆ ವಿದಿತಮಪ್ಪಿನಂ ಸರಲ್ಮಟಿಗಳಿಯುತ್ತರ್ಜುನಂ, ಬಾನ್ ನೆಲಂ ಒಡೆಯಂ ತೇರ್ ಕುವರಂ ಪಟವಿಗೆ ಪಡೆ ಸಾರಥಿ ಕುದುರೆ ಬೀರರ್ ದೆಸೆಗಳೆಂಬಿವಾವುವುಂ ಕಾಣದಂತೆಸಗಿದಂ.

**ದುರ್ಯೋಧನಂ**—(ಬೆಕ್ಕಸಂಬಟ್ಟು) ಬಟಿಯಂ ಬಟಿಯಂ?

**ಸುಂದರಕಂ**—ಬಟಿಯುವೊಡೆಯನೆ! ಕ್ಷಣಮಾತ್ರದೊಳ್ ಬಾಣಸಂಪಾತಂಗಳಿಂ ಪಾಂಡವಬಲಂ ಮೋದಂಬಡುತಿರ್ಪ್ಪಿನಂ ಕುರು ಬಲಂ ವಿಷಾದಂಗೊಂಡಿರ್ಪ್ಪಿನಂ ಅಕಟ! ಹಾ! ಹತನಾದಂ ಕುಮಾರ ವೃಷಸೇನನೆಂದು ಮಹಾಕಲಕಲಮುಣ್ಮಿದುದು.

**ದುರ್ಯೋಧನಂ**—(ಕಣ್ಬನಿದುಂಬಿ ಕೋಪದಿಂ) ಬಟಿಕೆ ಬಟಿಕೆ?

**ಸುಂದರಕಂ**—ಬಟಿಕೆ ಸ್ವಾಮಿಯೆ! ಸಾರಥಿಯುಂ ವಾಜಿ ಗಳುಂ ಸಂಹತಂಗಳಾಗಿರೆ, ಮೇಣ್ ಸತ್ತಿಗೆ ಚಾಮರಂ ಪಟಯಿಗೆ ಭಿನ್ನಭಿನ್ನಂಗಳಾಗಿರೆ, ಹೃದಯಮರ್ಮಭೇದಕಮಪ್ಪೊಂದೆಸರಲಿಂ ನಿಹತ ನಾಗಿ ತೇರ ನಡುವೆ ಸಿಲ್ಕಿ, ಸಗ್ಗದತ್ತಣಿಂ ಜಗುಟ್ದ ದೇವಕುಮಾ ರಂಬೊಲ್ ಬಿಟ್ದಿರ್ಪ್ಪ ಕುಮಾರಂ ಕಣ್ಗೆವಂದಂ.

**ದುರ್ಯೋಧನ**—(ಕಣ್ಣೀರಿಟ್ಟು) ಅಹಹ! ಇಂ ಕೇಳ್ವುದು ಸಾಲ್ಗುಂ. ಹಾ! ವತ್ಸ ವೃಷಸೇನ! ಹಾ! ಎನ್ನಂಕದೊಳ್ ಲಾಲಿತ ನಾಗಿ ಬಳೆದವನೆ! ಹಾ! ಎನ್ನಾಣತಿಯನನುವರ್ತಿಪನೆ! ಹಾ! ಗದಾ ಯುಧಪ್ರಿಯನೆ! ಹಾ! ಶೌರ್ಯಸಮುದ್ರನೆ! ಹಾ ರಾಧೇಯಕುಲಾಂಕುರ ವೆನಿಸಿದವನೆ! ಹಾ! ದುಶ್ಶಾಸನನಿರ್ವಿಶೇಷನೆ! ಹಾ! ಪ್ರಿಯದರ್ಶನನೆ! ಹಾ! ಸಕಲಗುರುಜನಕ್ಕಂ ವತ್ಸಲನೆನಿಸಿದನೆ! ಎನಗೆ ಪಡಿನುಡಿಗುಡು. ಹಾ ಕಷ್ಟಂ ಕಷ್ಟಂ!

**ಅತಿವಿಪುಳಂಗಳಪ್ಪ ನಯನಂಗಳಿನೊಪ್ಪಿ ನವೋದಿತೇಂದುವೋ |**
**ಲತಿಶಯಕಾಂತಿಯಂ ತಳೆದು ಮೇಣ್ ವಿಲಸನ್ನವಯೌವನಾಂಕುರಾ ||**

ನ್ವಿತಮೆನಿಸಿದ್ದುದ ದಿಟ್ಟಿ ತೊಟಲುತ್ತಿರಲಂದಸು ಪೋಪ ಕಾಲದೊಳ್ |
ದ್ಯುತಿಯುೞಿದಾಭವನ್ಮುಖಮನಕ್ಕಟ ಕರ್ಣನದೆಂತು ನೋಡಿದಂ ||

**ಸೂತಂ**—ಆಯುಷ್ಮಂತನೆ! ಸಾಲ್ಗುಂ. ಪಿರಿದುಂ ದುಃಖಿಸುವು ದಾಗದು.

**ದುರ್ಯೋಧನಂ**—ಸೂತ! ಸುಕೃತಶಾಲಿಗಳಲ್ತೆ ದುಃಖಿಪರ್ ? ಎಮಗಾದೊಡೆ,

ಇದಿರೊಳ್ ನಂಟರ್ ಹತರ |
ಪ್ಪುದುಮುಳುರ್ದಿಪರಿಭವಾಗ್ನಿಯಿಂ ಸುಟ್ಟು ವಲಂ ||
ಹೃದಯಂ ಸೀಕರಿಪೋಗಿ |
ರ್ಪ್ಪುದು ಮತ್ತಮಿದಕ್ಕೆ ದುಃಖಮೇಂ ವ್ಯಥೆಯಿನ್ನೇಂ||೧೧೬||

(ಎಂದು ಮೂರ್ಛೆಗೊಳ್ಗುಂ.)

**ಸೂತಂ**—ಸಮಾಧಾನವೊಂದು ; ಸಮಾಧಾನವೊಂದು.

**ದುರ್ಯೋಧನಂ**—(ಎೞ್ಚೆತ್ತು) ಸುಂದರಕ! ಬೞಿಕಂ ಕೆಳೆಯು ನಂಗರಾಜಂ ಏಂನೆಗೞ್ದಂ ?

**ಸುಂದರಕಂ**—ಬೞಿಕಂ ಮಹಾಪ್ರಭುವೆ! ಅಂತಪ್ಪವತೆಗಡ ಪ್ಪಾದ ಮಗನ ನೋಟದಿಂ ಉಣ್ಮಿದ ಕಣ್ಣೀರಂ ಉೞಿದು ಶತ್ರುಪ್ರಹಾ ರಮಂ ಲೆಕ್ಕಿಸದೆ ಸ್ವಾಮಿಯುಂಗರಾಜಂ ಅರ್ಜುನನನಿದಿರ್ಚ್ಚಿ ನಿಂದಂ. ಬೞಿಕಂ ಪುತ್ರಸಂಹಾರದಿಂ ಕ್ರೋಧಾವಿಷ್ಟನಾಗಿ ದುಃಖಭಯಂಗಳ ನುೞಿದು ಅಂತಪ್ಪ ಬೀರಮಂ ಮೆಱೆವಂಗರಾಜನಂ ಕಂಡು ಭೀಮ ನಕುಲಸಹದೇವದ್ರುಪದಾದಿಗಳ್ ಅರ್ಜುನನ ರಥದ ಸುತ್ತಲುಂ ಸುತ್ತುಂಗೊಂಡರ್.

**ದುರ್ಯೋಧನಂ**—ಬೞಿಕೆ ಬೞಿಕೆ ?

**ಸುಂದರಕಂ**—ಬೞಿಕೆ ಅರ್ಜುನನ ಬಿಲ್ಲೆಂಬ ಮಹಾಪ್ರಳಯ ಮೇಘದತ್ತಣಿಂ ಪೊಣ್ಮುವ ಕೂರಿದುವಪ್ಪ ಪಲಸಾಸಿರಂ ಶರಧಾರೆಗಳ್

ಪತ್ತುದೆಸೆಗಳುಮಂ ಮುಸುಂಕುತಿರೆ, ಶಲ್ಯಂ ಸ್ವಾಮಿಯುನಂಗರಾಜನನಧಿಕರಿಸಿ, ಅಂಗರಾಜ! ನಿನ್ನ ತೇರ ಕುದುರೆಗಳ್ ಸಂಹೃತಂಗಳಾದುವು. ಇದಱೊಂದುಗಾಲಿಯ ಪಟ್ಟಿಯುಂ ಮೂಕಿಯುಂ ಖಂಡಿತಂಗಳಾದುವು; ಆದಱನೀಗಳ್ ಭೀಮಾರ್ಜುನರನಿದಿರ್ಚ್ಚಿ ಕಾಳೆಗಂಗೆಯ್ವುದು ತಗದು— ಎಂದು ನುಡಿದು, ತೇರಂ ಪಿಂತಣ್ಗೆ ನೂಂಕಿ ಬೞಿಕಂ ಸ್ವಾಮಿಯುಂ ತೇರತ್ತಣಿನಿೞಿಪಿ ಪಲತೆಱದಿಂ ಸಂತವಿಟ್ಟಂ.

**ದುರ್ಯ್ಯೋಧನಂ**—ಬೞಿಕ್ಕೆ ?

**ಸುಂದರಕಂ**—ಬೞಿಕ್ಕೆ ಸ್ವಾಮಿಯುಂಗರಾಜಂ ಚಿರಕಾಲಂಬರಂ ತಳ್ವಿ ಪೆಱತೊಂದಂ ತೇರಂ ತಪ್ಪುದೆಂದು ಪರಿಜನಕ್ಕೆ ಬೆಸಸಿದಂ. ಬೞಿಕಂ ಪರಿಜನಂ ತಂದ ತೇರಂ ನೋಡಿ, ಎನ್ನ ಮೇಲೆ ಕಟಾಕ್ಷವಿಟ್ಟು—ಎಲೆಸುಂದರಕ! ಇತ್ತ ಬಾರೆಂದಂ. ಬೞಿಯುಮಾನಾತನ ಬೞಿಯಂ ಸಾರ್ದೆಂ. ಬೞಿಕಂ ಮುಂಡೆಯತ್ತಣಿಂ ಪತ್ರಮನೊಂದಂ ತೆಗೆದು ತನ್ನ ಮೆಯ್ಯತ್ತಣಿಂ ಪನಿತ ನೆತ್ತರ್ವನಿಗಳೊಳ್ ಸರಲ್ಗುದಿಯು ನೞ್ದಿ ಮಹಾಪ್ರಭುವಿಂಗೆ ಈವಿಚಾರಮಂ ಬರೆದು ಕಳಿಪಿಸ್ಪರ್ಣಂ.

**ದುರ್ಯ್ಯೋಧನಂ**—(ಕೈಕೊಂಡು ಓದುವಂ) ಸ್ವಸ್ತಿ ಶ್ರೀಮನ್ಮಹಾರಾಜದುರ್ಯ್ಯೋಧನಂಗೆ; ರಣಾಂಗಣದತ್ತಣಿಂ ಕರ್ಣಂ ಕೊರಲೊಳ್ ಗಾಢಾಲಿಂಗನಂಗೆಯ್ದು ಉದಂತಮನಿದನಿಂತಱುಪುವಂ :—

ಘನನಸ್ತ್ರೌಘವಿಧಾನದಲ್ಲಿವನಿವಂಗಿಲ್ಲಾಜಿಯೊಳ್ ಸಾಟಿಯೆ |
ನ್ನನುಜಾತರ್ಕಳಿನೀತನಗ್ಗಳನಿವಂ ಶಕ್ತಂ ಗೆಲಲ್ ಪಾರ್ಥರಂ ||
ಎನುತುಂ ನೀನೆನಗೊಲ್ದೆ ನಾಂ ಸದೆಯೆನಾದುಶ್ಶಾಸನಾರಾತಿಯಂ |
ಘನದೋರ್ವೀರ್ಯದಿನೋ ದೃಗಂಬುವಿನೊ ತಾಳ್ ದುಃಖಪ್ರತೀಕಾರಮಂ||

ಮಿತ್ರ ಕರ್ಣ! ಮಿತ್ರ ಕರ್ಣ! ಇದೇಂ ನೂರ್ವರೊಡವುಟ್ಟಿದರ್ ಹತರಾಗೆ, ಮುಮ್ಮಲಂಮುಱುಗುತಿರ್ಪನನೆನ್ನಂ ನೀಂ ಪೆಱತೊಂದಱಿಂ

ನುಡಿಗಣೆಯಿಂ ಘಟ್ಟಿಪೆ? ಎಲೆ ಭದ್ರ ಸುಂದರಕ! ಈಗಳಂಗರಾಜಂ ಏಗೆಯ್ಯುತಿರ್ದಪಂ?

**ಸುಂದರಕಂ**—ಒಡೆಯನೆ! ತೊಟ್ಟ ಸವಗಮಂ ಕಳೆದಿಟ್ಟು ತನ್ನ ಹತಿಯೊಳ್ ನಿಶ್ಚಯಂಗೊಂಡು ತಾನೆ ಸಮರಮನಱಸುವಂ.

**ದುರ್ಯೋಧನಂ**—(ಕೇಳ್ದು ಘಟ್ಟಿಲನೇಱುತ) ಸೂತ! ರಥಮಂ ತಾ. ಸುಂದರಕ! ನೀನುಂ ಭೋಂಕನೆ ಪೋಗಿ ನಾಂ ಪೇಳ್ದೆನೆಂದು ಅಂಗರಾಜಂಗಿಂತಱುಪು—ನೀನೀಗಳ್ ಗೆಲ್ಲಮನಾಟಿಪನಲ್ತು; ಒಂದೆ ಗಡ ನಮ್ಮಿರ್ವ್ವರೀಸಂಕಲ್ಪಂ. ಪೆಱತೇನೆನೆ—

ಖಳಕೌಂತೇಯರನಿಕ್ಕಿ ಬಾಂಧವಕುಲಕ್ಕೆಲ್ಲಂ ನಿವಾಪಾಂಬುವಿ |
ತ್ತುೞಿದರ್ನ್ನಂಟರಮಾತ್ಯರುಂ ಬೆರಸು ನೀಡುಂ ಸೂಸಿ ಕಣ್ಣೀರ್ಗಳಂ ||
ತಳೆದಿನ್ನಿಲ್ಲದುದಂ ಪರಸ್ಪರದೃಢಾಂಗಾಲಿಂಗಮಂ ನಾಂ ಚಿರಂ | ಕಳೆವಂ
ಪಾೞೊಡಲಂ ವಲಂ ದುಗುಡದಿಂ ಮೇಣ್ ಸೌಖ್ಯದಿಂದಿರ್ವ್ವರುಂ ||

ಒಂದುಪಕ್ಷದೊಳ್ ದುಗುಡಮನಧಿಕರಿಸಿ ನಾಂ ಪೇೞ್ವುದೇನು ಮಿರದು. ಏಕೆನೆ—

ಸೂನುವೆನಗಲ್ಲನೇಂ ವೃಷ |
ಸೇನಂ ನಿನಗನುಜನಲ್ಲನೇ ಯುವರಾಜಂ ||
ಏನಂ ನಿನಗಾಂ ಬೋಧಿಪೆ |
ನೇನಂ ನೀನೆನಗೆ ಮಾಡುವೈ ಬೋಧನಮಂ ||೧೧೯||

ಎಂದು.

**ಸುಂದರಕಂ**—ಮಹಾಪ್ರಭು ಬೆಸಸಿದಂತೆ (ಎಂದು ಪೋಪಂ)

**ದುರ್ಯೋಧನಂ**—ಆಃ! ಚಕ್ರಧಾರೆಯ ದನಿಯಂತಿರ್ಕ್ಕುಂ.

**ಸೂತಂ**—(ಕಿವಿಗೊಟ್ಟು) ಆಯುಷ್ಮಂತನೆ! ಕಿಚಿಕಿಲ್ವೆರಸಿದ ಚಕ್ರಧಾರಾಧ್ವನಿ. ನಿಕ್ಕುವಂ ಪರಿಜನಂ ರಥಮಂ ತಂದಿರ್ಕ್ಕುಂ.

**ದುರ್ಯೋಧನಂ**—ನೀಂ ಪೋಗು, ಸಜ್ಜುಗೆಯ್.

**ಸೂತಂ**—ಮಹಾರಾಯನಾದೇಶಿಸಿದಂತೆ (ಎಂದು ಪೋಗಿ ಮಗುೞ್ದು ಪುಗುವಂ.)

**ದುರ್ಯೋಧನಂ**—(ನೋಡಿ) ಅದೇಕೆ ನೀನೀಯೞು?

**ಸೂತಂ**—ಇದೆ ತಾತನುಂ ಮಾತೆಯುಂ ಸಂಜಯನೊಡನೆ ರಥಮನಳಂಕರಿಸಿ ಪ್ರಭುವಿನ ಸನ್ನಿಧಿಗೆ ಬಂದಪರ್.

**ದುರ್ಯೋಧನಂ**—ಏಂ ತಾತನುಂ ಮಾತೆಯುಂ ಬಂದರೇ? ಕಷ್ಟಂ! ಬಿದಿ ಪಿರಿದುಂ ಜುಗುಪ್ಸೆಯನೊಡರ್ಚಿತು. ಸೂತ! ನೀಂ ಪೋಗು; ರಥಮಂ ತಳ್ವದೆ ತಾರ. ಆನುಂ ತಾತಂಗೆ ಗೋಚರನಾಗದೆ ಏಕಾಂತದೊಳಿರ್ದಪೆಂ.

**ಸೂತಂ**—ಆಯುಷ್ಮಂತನೆ! ಬಾಂಧವರೊಳಗುೞಿದಂ ನೀನೊರ್ವನೆ ಗಡಿವರ್ಗೆ? ಆದೆಂತೀತಾಯ್ತುಂದೆವಿರಂ ನೀಂ ಸಂತವಿಡೆ?

**ದುರ್ಯೋಧನಂ**—ಸೂತ! ಹತಭಾಗ್ಯನಾನೆಂತು ಸಂತವಿಡುವೆಂ? ನೋಡು—

ತರದಿಂದಂ ಕಂಡು ತಾಯುಂ ಪಿತೃವನೆೞಿಗಿ ದುಶ್ಶಾಸನಂ ನಾನುಮಿರ್ವರ್ | ಸಿರದಲ್ಲಾ ಭ್ರಾತರಾಗಿಂದವರಿನನುವರಕ್ಕೀಗಳೇ ಬಂದೆವಲ್ತೇ || ಅರಿ ಬಲ್ಪಿಂದಂತುಟಾದುರ್ದಶೆಯನೆಸಗಿರಲ್ ಬಾಲಕಂಗಕ್ಕಟಾ ನಿ | ಷ್ಕರುಣಾತ್ಮಂ ಪೋಗಿ ಮಾತಾಪಿತೃಗಳ ಬೞಿಯೊಳ್ ನಿಂದು ನಾನೇನನೆಂಬೇಂ ||೧೨೦||

ಆದೊಡಂ ಪಿರಿಯರನವಶ್ಯಂ ವಂದಿಸಲೆವೇೞ್ಕುಂ.

(ಎಂದಿರ್ವರುಂ ಪೋಪರ್.)

ಇಂತಿದು ತುರೀಯಾಂಕಂ.



## ಪಂಚಮಾಂಕಂ.

---

(ಬಳಿಕೆ ರಥಯಾನದಿಂ ಸಂಜಯುಂ ಗಾಂಧಾರೀಧೃತರಾಷ್ಟ್ರರುಂ ಪುಗುವರ್)

**ಧೃತರಾಷ್ಟ್ರಂ**—ವತ್ಸ ಸಂಜಯ! ಕುರುಕುಲಮೆಂಬ ವನಕೆಲ್ಲಂ ಇದೊಂದೇ ತಳಿರೆನಿಪ ಅಣುಗಂ ದುರ್ಯೋಧನಂ ಅದಾವೆಡೆಯೊಳಿರ್ದಪಂ? ಬರ್ದುಂಕಿರ್ಪನೋ ಬರ್ದುಕಿರನೋ? ಪೇಳ್.

**ಗಾಂಧಾರಿ**—ವತ್ಸ ಸಂಜಯ! ದಂದುಗಕ್ಕೆಡೆಯಾದ ವತ್ಸನವಂ ನಿಕ್ಕುವಂ ಬರ್ದುಕಿರ್ದೊಡೆ ಅವನಿರ್ಪೆಡೆಯುಂ ಪೇಳ್.

**ಸಂಜಯಂ**—ಮಹಾರಾಜನಿವನೊರ್ವನೆ ಇತ್ತ ವಟವಿಟಪಿಯ ನೆಟಲೊಳ್ ಇದೆ ಕುಳ್ಳಿರ್ದಪನಲ್ತೇ?

**ಗಾಂಧಾರಿ**—ಎಲೈ! ವತ್ಸನೊರ್ವನೆ ಎಂದು ಪೇಳ್ದಪಯ್; ಅದೇಂ ಈಗಳವನೊಡವುಟ್ಟಿದರ್ ನೂರ್ವರ್ ಅದೇತರ್ಕೆ ಪಕ್ಕದೊಳಿರರ್?

**ಸಂಜಯಂ**—ತಾತ! ಮಾತೆ! ಸ್ವೇಷ್ಟಾನುಸಾರದಿಂ ಮಹಾರಥದತ್ತಣಿಂ ನೀವವತರಿಪುದು.

**ಇರ್ವರುಂ**—(ಅವತರಣಮನಭಿನಯಿಪರ್)

(ಬಳಿಯುಂ ನಾಣ್ಚಿರಸು ಕುಳ್ಳಿರ್ಪ ದುರ್ಯೋಧನಂ ಪುಗುವಂ)

**ಸಂಜಯಂ**—(ಬಳಿಸಾರ್ದು) ಮಹಾರಾಜಂಗೆ ವಿಜಯಮಕ್ಕೆ; ತಾತಂ ನಿನ್ನ ಮಾತೆಯೊಡನೆ ಇದೆ ಬಿಜಯಂಗೆಯ್ದಪಂ; ಮಹಾರಾಜಂ ಅದೇಕೆ ಕಟಾಕ್ಷಿಸದಿರ್ಪುದು?

**ದುರ್ಯೋಧನಂ**—(ಬೆಕ್ಕಸಮುಂ ನಟಿಪಂ).

**ಧೃತರಾಷ್ಟ್ರಂ**—

ಕರಣದಿನೀಟ್ದು ಶಲ್ಯತತಿಯುಂ ಸವಗಂದೆಱೆದಿಟ್ಟು ಪಟ್ಟಿಗ |
ಟ್ಟರೆ ವ್ರಣವಾಱಲಿಂಬೊಱಗಿ ದೂರದೆ ನಿರ್ಜಿತವೈರಿವರ್ಗರಂ ||

ಧರಣಿಪರಂ ವಿಲಾಸದೆ ವಿಲೋಕಿಪ ನಿನ್ನೆಡೆಗೆಯ್ದಿ ಸಹ್ಯಮೇಂ |
ತರಳನೆ ಬಾಧೆಯೆಂದು ಕಿವಿಯೊಳ್ ಬೆಸಗೊಂಡೆನೆ ಪಾಪಿ ಮೆಲ್ಲನಾಂ ||

**ದುರ್ಯೋಧನಂ**—(ಚಿಕ್ಕಸಮನೊಳಕೊಂಡ ದುಃಗುಡಮನಭಿನಯಿಸಿ)

**ಗಾಂಧಾರಿಯುಂ ಧೃತರಾಷ್ಟ್ರನುಂ**—(ಸೋಂಕಿನಿಂ ಕಟಿಕ್ಕಿ ಸುವರ್)

**ಗಾಂಧಾರಿ**—ವತ್ಸ! ಪಿರಿದುಂ ಬೆಟ್ಟಿದುವಪ್ಪಿ ಸುಗೆಗಳ ನೋವಿನಿಂ ಆಕುಲಿಪಂಗೆ ನಿನಗೆ ಎಮ್ಮ ವಿಷಯದೊಳ್ ನುಡಿ ಪೊಱಪೊಣ್ಮದು.

**ಧೃತರಾಷ್ಟ್ರಂ**—ಅಣುಗ ದುರ್ಜೋದನ! ಎನ್ನೊಡನೆಯುಂ ನೀಂ ನುಡಿಯದುದು ಮುನ್ನೆಂದಾನುಮುಂಟೆ?

**ಗಾಂಧಾರಿ**—ತನಯ! ನೀನುಮೆಮ್ಮೊಡನೆ ನುಡಿಯದೊಡೆ ಈಗಳ್ ದುಶ್ಶಾಸನಂ ನುಡಿಯಿಪನೇ? ಮೇಣ್ ದುರ್ಮರ್ಷಣಂ ಪೆಱಂ ನುಡಿಯಿಪರೇ? (ಎಂದಟ್ಟುಳ್)

**ದುರ್ಯೋಧನಂ**—

ಅನುಜರ್ಕಳ್ ಹತರಾಗೆ ಸುಮ್ಮನೆಯೆ ನೋಡುತ್ತಿರ್ದ್ದ ಪಾಪಾತ್ಮನಾಂ| ಜನನೀ ಕಾರಣಮಲ್ತೆ ಕಣ್ಬನಿಗಳಂ ನೀಂ ತಾತನುಂ ವರ್ಷಿಸಲ್ || ಘನವಾದೀಭರತಕ್ಷಿತೀಂದ್ರಕುಲದೊಳ್ ದುರ್ಜನ್ಮಮಾಂತಿರ್ಪನಂ | ತನಯಧ್ವಂಸವಿಧಾತೃವಂ ತನಯನೆಂದೇಕೆನ್ನನಾರಯ್ವೆ ನೀಂ ||೧೨||

**ಗಾಂಧಾರಿ**—ವತ್ಸ! ಸಾಲ್ಗುಂ; ದುಃಖಿಪುದಱಿನೇಂ? ಈ ಕಣ್ಣಲಿಗಳ್ಗೆ ನೀನಾದೊಡಮೊರ್ವ್ವಂ ದಾರಿದೋಱುವನಾಗಿ ಚಿರಕಾಲಂ ಬರ್ದುಕು. ನಿನಗಿನ್ನರಸುತನದಿಂ ಮೇಣ್ ಪಗೆತನದಿಂದಪ್ಪುದೇಂ?

**ದುರ್ಯೋಧನಂ**—

ಜನನೀ ಪೇೞ್ವೆಯದೇನನೋ ತಗದುದಂ ನೀನಿಂತು ದೀನೋಕ್ತಿಯಂ | ವಿನುತಕ್ಷತ್ರಿಯೆಯೆಲ್ಲಿ ನೀಂ ಬಗೆವೊಡೀದೈನ್ಯಂ ನಿನತ್ತೆಲ್ಲಿ ಪೇೞ್ || ಇನಿತುಂ ವತ್ಸಲಭಾವವಿಲ್ಲದಳೆ ಹಾ ನೂರ್ವರ್ ಸುತರ್ ಸತ್ತುದಂ | ಮನದೊಳ್ ಚಿಂತಿಪೆಯಿಲ್ಲ ನೀಂ ತಗದನಂ ರಕ್ಷಿಪ್ಪೆಯೆನ್ನಂ ವಲಂ ||೧೨೩||

ಒಂದು ಪಕ್ಷದೊಳಿದು ಪುತ್ರಶೋಕದೆಸಕವೆ.

**ಸಂಜಯಂ**—ಮಹಾರಾಜ! "ಕೊಡಂ ಬಾವಿಯೊಳ್ ಬೀೞೆ, ಹಗ್ಗಮುಮನದಱೊಳ್ ಬಿಸುಡಲಾಗದು" ಎಂಬ ನಾಣ್ಣುಡಿಯಿದು ವ್ಯರ್ಥಮೇಂ?

**ದುರ್ಯೋಧನಂ**—ಈನುಡಿ ಅನಿತ್ತುಪೊದ್ದುಗೆಯುಳ್ಳುದಲ್ತು; ಏಕೆನೆ, ಉಪಕಾರವಿಷಯಮಾದುದೆ ಅೞಿದಿಂಬೞಿಯಂ ಇನ್ನುಪಕಾರ ಸಾಧನದಿನೇಂ? (ಎಂದೞ್ವಂ)

**ಧೃತರಾಷ್ಟ್ರಂ**—(ದುರ್ಯೋಧನನನಪ್ಪಿಕೊಂಡು) ವತ್ಸ! ಸಂತಮಿರ್; ಸಂತಮಿರ್. ಎನ್ನುಮಂ ಅತಿದೀನೆಯಂ ನಿನ್ನ ಜನನಿಯುಮಂ ಸಂತವಿಡು.

**ದುರ್ಯೋಧನಂ**—ತಾತ! ನಿಮ್ಮನೀಗಳ್ ಸಂತವಿಡುವುದಱಿದು.

**ಧೃತರಾಷ್ಟ್ರಂ**—ಏಕೆ?

**ದುರ್ಯೋಧನಂ**—

ಇಂದಾಂ ಕುಂತಿಯ ಸುತರಂ |
ಕೊಂದಿಡಲವಳೊಡನೆ ಪೋಲ್ಕೆಯಿಂ ನೀವಿರ್ವರ್ ||
ದಂದುಗದೊಳಂ ಮನೋದಾ |
ರ್ಢ್ಯಂದಾಳ್ದಿ ಬೞಿಕ್ಕೆ ಸುತರ್ಗೆ ಸಂತಪಿಸದಿರಿಂ ||೧೨೪||

**ಗಾಂಧಾರಿ**—ವತ್ಸ! ನೀನಾದೊಡಮೊರ್ವ್ವಂ ಬರ್ದುಂಕಿರ್ಪೆ ಗಡಾ! ಈಗಳಿದುವೇ ಅಭಿನಂದ್ಯಂ; ಅದಱಿಂ ಕುವರ! ನೀನೀಗಳ್

ಅಸದೃಶವಾದ ರಣೋದ್ಯೋಗದೊಳ್ ವರ್ತಿಸಲಸಮಯಂ; ಪ್ರಸನ್ನನಾಗು; ಇದೆಕೊಳ್ ನಾನಿಡುವೆಂ ನಿನಗಂಜಳಿಯಂ; ಸಮರೋದ್ಯೋಗದತ್ತಣಿಂ ಮರಲ್; ಎನ್ನ ನುಡಿಯಂ ಮುಖ್ಯಮೆಂದು ಅಂಗೀಕರಿಸು.

**ಧೃತರಾಷ್ಟ್ರಂ**—ವತ್ಸ! ಆಲಿಸು ನಿನ್ನ ಮಾತೆಯ ಮಾತಂ; ಮೇಣ್ ಬಂಧುವರ್ಗಮನೆಲ್ಲಮನಗಲ್ದಿನ್ನ ನುಡಿಯಂ. ನೋಡು—

ಕಡುಪುಳ್ಳಾರಿಂದೆ ದಾಯಾದರನೆಣಿಸದೆ ನೀನಿರ್ದ್ದಯಾದ್ರೋಣಭೀಷ್ಮರ್| ಮಡಿದರ್ ಮೇಣಂಜುಗುಂ ಕರ್ಣನ ಸುತನನಿದಿರ್ಕೊಂದ ಪಾರ್ಥಂಗೆ ಲೋಕಂ || ಬಡಿದಿಟ್ಟಂ ಮಕ್ಕಳಂ ನೂರ್ವರನರಿಯುವನಾಪೂಣ್ಕೆ ನಿನ್ನಲ್ಲಿ ಶೇಷಂ | ಬಡೆದಿರ್ಕ್ಕುಂ ಮಾಣ್ ರಿಪುಕ್ರೋಧಮನೆಳೆಯನೆ ಪೆತ್ತಂಧರಂ ಪಾಲಿಸೆಮ್ಮಂ ||೧೨೫||

**ದುರ್ಯೋಧನಂ**—ಸಮರದತ್ತಣಿಂ ಮರಲ್ದೇಗೆಯ್ವೆಂ?

**ಗಾಂಧಾರಿ**—ವತ್ಸ! ನಿನ್ನ ತಂದೆ ಮೇಣ್ ವಿದುರಂ ಏವೇಳ್ವರ್ ಅದಂ ಗೆಯ್.

**ಸಂಜಯಂ**—ಇದು ತಗುಗುಂ.

**ದುರ್ಯೋಧನಂ**—ಸಂಜಯ! ಈಗಳುಮುಪದೇಶಿಪುದಿರ್ಕ್ಕುಮೇ?

**ಸಂಜಯಂ**—ಜೀವಿಸಿರ್ಪನ್ನೆಗಂ ಜಯಾಕಾಂಕ್ಷಿಗಳ್ಗರಸಗ್ಗೆ ಪ್ರಜ್ಞಾಶಾಲಿಗಳುಪದೇಶಿಸವೇಳ್ಕುಂ.

**ದುರ್ಯೋಧನಂ**—(ಕೋಪಂಗೊಂಡು) ಅಕ್ಕೆ; ಎಮಗೆ ತಕ್ಕುಪದೇಶಮಂ ಪ್ರಜ್ಞಾಶಾಲಿಯೆನಿಪ ನಿನ್ನತ್ತಣಿಂದಮೆ ಕೇಳ್ವೆವು.

**ಧೃತರಾಷ್ಟ್ರಂ**—ವತ್ಸ! ತಕ್ಕುದಂ ನುಡಿವಂಗೆ ಸಂಜಯಂಗೆ ಕನಲ್ವುದಱಿನೇಂ? ನೀಂ ಮನಶ್ಶಾಂತಿಯನಾಂಪೊಡೆ ನಾನೇ ನಿನಗಿನಿಸು ನುಡಿದಪೆಂ; ಕೇಳ್.

**ದುರ್ಯೋಧನಂ**—ತಂದೆಯೆ! ಪೇಳ್.

**ಧೃತರಾಷ್ಟ್ರಂ**—ಬಿತ್ತರದಿನೇಂ? ಈಗಳುಮಭಿಮತದಿಂ ಪಣಬಂಧದಿಂ ಯುಧಿಷ್ಠಿರನೊಡನೆ ಸಂಧಿಗೊಳ್.

**ದುರ್ಯೋಧನಂ**—ತಾತ! ಪುತ್ರವಾತ್ಸಲ್ಯದ ಬಾಗುಳಿಂ ಮಾತೆಯುಂ, ಮೌರ್ಖ್ಯದಿಂ ಸಂಜಯನುಂ ಇಂತು ಮನವೊಲ್ವಂತೆ ನುಡಿಗೆ; ನಿಮಗಮಿಂತಱಿಯಮೆಯೆ? ಒಂದುಪಕ್ಷದೊಳ್ ಮಕ್ಕಳಟಿವಿನಿಂದುಣ್ಮಿದ ದುಃಖಜ್ವರಂ ಇಂತೆಸಗಲಾರ್ಪುದು. ಅಂತಲ್ಲದೆಯುಂ, ತಾತ! ನೂರ್ವರೊಡವುಟ್ಟಿದರ್ ಬರ್ದುಂಕಿರ್ದಾಗಳೆ ಕೃಷ್ಣನುಪನ್ಯಸಿಸಿದ ಸಾಮೋಕ್ತಿಗಳಂ ಕಡೆಗಣ್ಚಿದೆಂ. ಈಗಳ್ ಮಿತ್ರಯ್ಯನುಂ ಗುರುವುಂ ತಮ್ಮಂದಿರುಂ ಅರಸುವಿಂಡುಂ ಅಟಿದಿರೆ, ತನ್ನೊಂದೊಡಲೊಲವಿನಿಂ ದುರ್ಯೋಧನಂ, ಮಾಪುರಸಗ್ಗದ ನಾಣನೊಡರಿಪುದಂ ಮೇಣ್ ಸುಖಕರಮಲ್ಲದುದಂ ಸಂಧಿಯಂ ಪಾಂಡವರೊಡನೆಂತು ನೆಗೞ್ವಂ? ಅಲ್ಲದೆಯುಂ ನೀತಿಜ್ಞನಾದೆಲೆಸಂಜಯ!

ಹೀನತೆಯಿಲ್ಲದ ಜನಪರ್ |
ಹೀನರೆನಿಪ್ಪರೊಡನೆಂತು ಸಂಧಿಯನೊಲ್ವರ್ ||
ಹೀನಂ ದುಶ್ಯಾಸನನಿಂ |
ದಾನೀಗಳ್ ಸೋದರಾನ್ವಿತಂ ಧರ್ಮಸುತಂ ||೧೨೬||

**ಧೃತರಾಷ್ಟ್ರಂ**—ಇಂತಿರೆಯುಂ ನಾಂ ಬೇಡಿದೊಡೆ ಯುಧಿಷ್ಠಿರಂ ಆವುದುಮನೊಡಚ್ಚದಿರಂ. ಅಂತಲ್ಲದೆಯುಮವನೇಗಳುಂ ತನ್ನಂ ನಿಮ್ಮತ್ತಣಿಂ ಕೀಟಿಂದೇ ಬಗೆವಂ.

**ದುರ್ಯೋಧನಂ**—ಅದೆಂತು?

**ಧೃತರಾಷ್ಟ್ರಂ**—ಕೇಳ್, ತಮ್ಮಂದಿರೊಳಾವನೊರ್ವಂ ಮಡಿದೊಡಂ ನಾನಸುವಡೆದಿರೆನೆಂದು ಯುಧಿಷ್ಠಿರಂ ಪೂಣ್ಕೆಗೆಯ್ದಿರ್ಪಂ. ಬವರದೊಳ್ ಪಿರಿದುಂ ಕವಡುಂಟಪ್ಪುದಱಿಂ ಅನುಜರ್ಗೆಲ್ಲಟಿವಕ್ಕುಮೋ

ಎಂಬಾಶಂಕೆಯಿಪ್ಪುದನಂ, ನೀಂ ಬಗೆಗೊಳ್ವಂತೆಯೆ ಸುಲಭನೆನೆ ಸಂಧಿಗವನೊಳಗಪ್ಪಂ.

**ಸಂಜಯಂ**—ಇದಿಂತು.

**ಗಾಂಧಾರಿ**—ಕುವರ! ಯುಕ್ತಿಯುಕ್ತಮಂ ತಂದೆಯುಕ್ತಮಂ ನೀನೊಪ್ಪುಗೊಳ್.

**ದುರ್ಯೋಧನಂ**—ಎಲೌ ತಾಯೆ! ಎಲೈ ತಂದೆಯೆ! ಎಲೆ ಸಂಜಯ!

ಒದವಲ್ ತಮ್ಮಂಗವೊವ್ವರುಂಗಟಿವಟಿದಪೆನಾನೆಂದವಂ ಪೂಣ್ದನೋರಂ | ದದೆ ನೂರ್ವರ್ ಸೋದರರ್ ಸತ್ತಿರೆ ಸಹಿಪನೆ ದುರ್ಯೋಧನಂ ಪ್ರಾಣಮಾಂತಿ || ಪ್ಪುದನಾದುಶ್ಶಾಸನೋರಸ್ಸ್ಥಲದ ರುಧಿರಮಂ ಪೀರ್ದನಂ ಭೀಮನಂ ಮ | ದ್ಗದೆಯಿಂ ಸೀಟಿದ್ದಿತ್ತಮಿಾಡಾಡೆನೆ ಕೃಪಣತೆಯಿಂ ಸಂಧಿಯಂ ಮಾಟಿಪ್ಪೆನೇ ನಾಂ ||೧೨೭||

**ಗಾಂಧಾರಿ**—ಹಾ ವತ್ಸ! ದುಶ್ಶಾಸನ! ಹಾ ದುರ್ಮರ್ಷಣ! ಹಾ ದುರ್ವಿನಯ! ಹಾ ವಿಕರ್ಣ! ಮಂದಭಾಗ್ಯೆಯಾನೀಗಳೊಂದಿದಿಂ ತಪ್ಪ ವಿಪತ್ತಿಯಂ ಲೋಕದೊಳಾರಾನುಮನುಭವಿಸಿಪ್ಪರೆಂಬುದಂ ಮುಂ ಕೇಳ್ದುದುಂಟೇ? ಹಾ ವೀರಜನನಿ! ಹಾ ಗಾಂಧಾರಿ! ನೀಂ ನೂಱುಂ ದುಕ್ಕಂಗಳಂ ಪಡೆದೆಯಲ್ಲದೆ ನೂರ್ವರಂ ಮಕ್ಕಳನಲ್ತು.

(ಎಲ್ಲರುಮಟ್ವರ್).

**ಸಂಜಯಂ**—(**ಕಣ್ಣೀರಂ ಸೂಸಿ**) ತಾತ! ಮಾತೆ! ಮಹಾರಾಜಂಗುಪದೇಶಂಗೆಯಲ್ಕೆ ನೀವೀಯೆಡೆಗೆ ಬಿಜಯಂಗೆಯ್ದಿರ್ದಪಿರ್. ಅದಱಿಂ ನಿಮ್ಮ ಮನವಂ ಬಿಗಿವಿಡಿವುದು.

**ಧೃತರಾಷ್ಟ್ರಂ**—ವತ್ಸ! ದುರ್ಯೋಧನ! ಅದೃಷ್ಟಂಗಳಿಂತು ವಿಮುಖಂಗಳಾಗಿರೆ, ನೀನುಂ ಪಗೆಗಳ ವಿಷಯದೊಳ್ ಪಿಡಿದ ಮಾನ

ಬಂಧಮುಂ ಸಡಿಲ್ಚದಿರೆ, ನಿನ್ನೊರ್ವ್ವನುೞಿವಿನಿಂ ಹರಣಂಬಿಡಿದಿರ್ಪ್ಪ ದೀನೆ ಗಾಂಧಾರಿಯುಂ ಆನುಂ ಶರಣನೇನಂ ಅವಲಂಬಿಪುದು ?

**ದುರ್ಯೋಧನಂ**—ಅವಲಂಬಿಪುದನಾಲಿಸಿಂ; ಆದೇನೆನೆ—

ಜಗಮೆಲ್ಲಂ ವಶಮಾಗೆ ಭೋಗಿಸುತೆ ರಾಜ್ಯೈಶ್ವರ್ಯಮಂ ಮೆಟ್ಟೆ ಶ | ತ್ರುಗಳಂ ಸಂನತರಾಜಮೌಳಿಕುಲರಾಜತ್ಪಾದರಾಗಿರ್ದ್ದವರ್ || ಪಗೆಯಿಂದಂ ಧುರದೊಳ್ ಕೊಲುತ್ತೆ ಹತರಾದರ್ ಮುಂತೆ ನೂರ್ವರ್ ಸುತರ್ | ಸಗರಂ ತಾಳ್ದಿದ ಭಾರಮಂ ತಳೆವುದೀಗಳ್ ತಾತನುಂ ಮಾತೆಯುಂ ||೧೨೮||

ಪೊಣರದೆ ಸ್ವಜೀವಿತರಕ್ಷಣಮಂ ಗೆಯ್ದಿರ್ದೊಡೆ ಮುಂ ಮೀಱಿದ ಕ್ಷತ್ರಧರ್ಮಂ ಮೀಱುದುದಾಗುತಿರ್ದ್ದತ್ತು.

(ನೇಪಥ್ಯದೊಳ್ ಪಿರಿದುಂ ಕೋಲಾಹಲಮುಕ್ಕುಂ).

**ಗಾಂಧಾರಿ**—(ಸಂಭ್ರಮದಿಂ) ಸಂಜಯ ! ಇದೇಂ ಹಾಹಾಕಾರಂ ಬೆರಸಿದ ತೂರ್ಯಧ್ವನಿ ಕೇಳ್ಗುಂ ?

**ಸಂಜಯಂ**—ಮಾತೆ! ಇದು ಇಂತಪ್ಪ ಭೀರುಜನಮಿರ್ಪ್ಪೆಡೆಯಲ್ತು.

**ಧೃತರಾಷ್ಟ್ರಂ**—ವತ್ಸ! ಸಂಜಯ! ಅತಿಭಯಂಕರಮಪ್ಪ ಬಿತ್ತರದ ಹಾಹಾಕಾರಮಿದಾವುದೆಂಬುದನಱಿ. ಇದರ್ಕ್ಕದಾವುದೋ ಪ್ರಬಲಕಾರಣಮುಂಟಕ್ಕುಂ.

**ದುರ್ಯೋಧನಂ**—ತಾತ! ಪ್ರಸನ್ನನಾಗು. ಎಮಗೆ ಬಿದಿ ಪ್ರತಿಕೂಲಮಲ್ತೆ? ಮಹಾಭಯಮುಳ್ಳುದಂ ಪೆಱತೊಂದುಮಂ ಸುದ್ದಿಯಂ ಕೇಳದಿರ್ಪ್ಪನಿತಱೊಳ್ ಆಂ ಸಮರಾಂಗಣಮನೆಯ್ದಲೊಪ್ಪುಗೊಳ್.

**ಗಾಂಧಾರಿ—ವತ್ಸ** ! ಅನ್ಧೆಯುನನಾಥೆಯುನೆನ್ನಂ ಇತ್ತಲ್ ಮೂರ್ತಂ ಸಂತವಿಡು.

**ಧೃತರಾಷ್ಟ್ರಂ**—ನೀಂ ಸಮರಮೆಯ್ದಲೆವೇಳ್ಪುದೆಂದು ತಱಿಸಂದಿರ್ದಪೆ; ಆದೊಡಂ, ಗುಪ್ತದೊಳ್ ಶತ್ರುಪ್ರತಿಘಾತಮನೆಸಗಲ್ ತಕ್ಕುದನುಪಾಯಮಂ ಇನಿಸು ಚಿಂತಿಸು.

**ದುರ್ಯೋಧನಂ**—

ಇದಿರೊಳ್ ನಂಟರನೆಚ್ಚು ಕೊಂದರಿಗಳಂ ನಾಂ ಗುಪ್ತದಿಂ ಕೊಲ್ವುದ | ಲ್ತದಱಿಂದೇನವರಂತೆ ಮಾಡೆ ಧುರದೊಳ್ ಗೂಢಪ್ರತೀಕಾರಮಂ ||

**ಗಾಂಧಾರಿ**—ಕುವರ! ನೀನೊರ್ವಂ; ನಿನಗಾವಂ ನೆರವಕ್ಕುಂ?

**ದುರ್ಯೋಧನಂ**—

ವಿದಿತತ್ವತ್ಸುತನಾಶಕಂ ಜನನಿ ನಾನೊರ್ವ್ವಂ ವಿಪಕ್ಷರ್ ಪಲರ್ |
ಬಿದಿಯಾಗಳ್ ಸಮವಿರ್ಕೆ ಪಾಂಡವವಿಹೀನಂ ತಾನೆನಿಕ್ಕುಂ ನೆಲಂ ||

(ನೇಪಥ್ಯದೊಳಗೆ ಕಲಕಲವಾದಿಂ ಬಟಿಯುಂ)

ಎಲೆಎಲೆ ಯೋಧರಿರಾ! ನೀಂ ಕೌರವೇಂದ್ರಂಗೆ ಬಿನ್ನವಿಪುದು. ಸಮನಿಸಿರ್ಕ್ಕುಮಿದು ಮಹಾಭೀಕರಮೆಸಕಂ. ಅಪ್ರಿಯಮನಱಿಪಲ್ ಪಿಂಜರಿಯಲಾಗದು. ಏಕೆನೆ, ಸಮಯಕ್ಕನುಗುಣಮಪ್ಪುದಂ ಪ್ರತಿಕ್ರಿಯೆಯುಂ ಈಗಳೆಸಗವೇೞ್ಕುಂ.

ಕರದಿಂ ವರ್ಜಿಸಿ ರಜ್ಜುವಂ ಕಶೆಯುಮಂ ಪಾರ್ಥೇಷುಚಿಹ್ನಾಂಗನಾ| ಗಿರುತುಂ ಮೆಲ್ಲನಿವಂ ರಥಾಧ್ವವಱಿತಿಪ್ಪರ್ಶ್ವಂಗಳಿಂದುಯ್ಯುತುಂ |
ಅಱಿಪುತ್ತಶ್ರುಗಳಿಂದೆ ಕರ್ಣನಿರವಂ ಕೇಳ್ವಗ್ಗೆ ಹೃತ್ಕಂಪಮಂ |
ಕುರುಗಳ್ಗೀಯುತೆ ಶೂನ್ಯದೊಳ್ ರಥದೊಳೀ ಶಲ್ಯಂ ಬರುತ್ತಿರ್ದಪಂ ||

**ದುರ್ಯೋಧನಂ**—(ಆಲಿಸಿ) ಇದನಾವಂ ಸಿಡಿಲ ಪೊಯ್ತಂದಂತೆ ಕೂರಿತಪ್ಪ ನುಡಿಯುಂ ಅಸ್ಪಷ್ಟಮೆನೆ ಪುಯಲ್ಚಿದಂ? ಆರಯ್ವುದು. ಎಲೆ ಅದಾವನಿಲ್ಲಿ?

**ಸೂತಂ**—(ಸಂಭ್ರಾಂತನಾಗಿ ಪೊಕ್ಕು) ಹಾ ಮಹಾರಾಜ! ಕೆಟ್ಟೆವು. (ಎಂದು ಬೀೞ್ವಂ)

**ದುರ್ಯೋಧನಂ**—ಪೇೞ್ ಪೇೞ್.

**ಸೂತಂ**—ಎಲೆ ಆಯುಷ್ಮಂತನೆ! ಪೇೞ್ವೆಂ?

ಜನತತಿ ಮೂರ್ಛಿಸಿತಿದು ಕ |
ರ್ಣನಾ ಮನೋರಥದವೋಲಣಂ ಬಱಿದಾದಾ ||
ತನ ರಥಮಂ ಪತ್ತಿದ ಶ |
ಲ್ಯನಿವಂ ಶಲ್ಯಂಬೊಲಂತರಂಬುಗಲೀಗಳ್ ||೧೩೧||

**ದುರ್ಯೋಧನಂ**—ಹಾ! ಮಿತ್ರ ಕರ್ಣ! (ಎಂದು ಮೂರ್ಛೆಗೊಳ್ವಂ)

**ಗಾಂಧಾರಿ**—ವತ್ಸ! ಸಮಾಧಾನವೊಂದು; ಸಮಾಧಾನವೊಂದು.

**ಸಂಜಯಂ**—ಸಂತವಿಪ್ಪುದು ಮಹಾರಾಜಂ.

**ಧೃತರಾಷ್ಟ್ರಂ**—ಅಹಹ! ಕಷ್ಟಂ ಕಷ್ಟಂ!!

ಮೊನೆಯೊಳ್ ಭೀಷ್ಮದ್ರೋಣರ್ |
ವಿನಿಹತರಾಗುವುದುಮೆನ್ನ ಕುವರಂಗವಲಂ ||
ಬನಮೆನಿಸಿದಿಷ್ಟಮಿತ್ರಂ |
ಘನಬಲನಾಅಂಗರಾಜನುಂ ಹತನಾದಂ ||೧೩೨||

ವತ್ಸ! ಸಮಾಧಾನವೊಂದು ಸಮಾಧಾನವೊಂದು. ಭರತಕುಲವಿಮುಖವಾದೆಲೆ ಹತವಿಧಿಯೆ!

ಕುರುಡಂ ಸುತಶತಮೃತಿಯಿಂ |
ಮಱುಗುತೆ ಸತಿಯೊಡನೆ ಶೋಚ್ಯದಶೆವಡೆದಾಂ ನಿ ||
ರ್ಗುರುಬಂಧುಮಿತ್ರನಾದೀ |
ದುರುಯೋಧನನಲ್ಲಿಯುಂ ನಿರಾಶಂ ನಿನ್ನಿಂ ||೧೩೩||

ವತ್ಸ! ಆರ್ತಿಯುಂ ನಿನ್ನ ಮಾತೆಯುಂ ಸಂತವಿಡು.

**ದುರ್ಯೋಧನಂ**—(ಎಬ್ಬಿಸುತ್ತ)

ನುಡಿ ಕರ್ಣ ಕರ್ಣಕಿನಿದೆನೆ |
ಕಡುಮುದಮೊಡರಿಸುತುಮೆನಗೆ ಸುತವತ್ಸಲನೇ ||
ಎಡೆವಿಡದಿರ್ದ್ದನನಪ್ರಿಯ |
ಮೊಡರ್ಚ್ಚದನನೆನ್ನನೇಕೆ ತೊಱೆದೆಯುದ್ದವೆ ನೀಂ ||೧೩೪||

(ಎಂದು ಮತ್ತೆ ಮೂರ್ಛಿತನಪ್ಪಂ)

(ಎಲ್ಲರುಂ ಸಂತವಿಡುವರ್)

ಎನಗಸುಗಳ್ಗಂ ವೆಗ್ಗಳ |
ನೆನಿಸಿದ್ದಾರ್ಅಂಗರಾಜನಟಿಯಲೊಡಂ ತಾ ||
ತನೆ ಸುಯ್ಯಲುಮಾಂ ನಾಣ್ಚುವೆ |
ನೆನೆ ಪೇಟಿನ್ನೆಂತು ಸಂತವಿಡುವೆಂ ಮನಮಂ ||೧೩೫||

ಆಲ್ಲದೆಯುಂ—

ಅರಿಯಿಂದಂ ಹತನಾಗಿ ಶೋಚ್ಯನೆನಿಸಿಪ್ಪಾರ್ವತ್ಸದುಶ್ಶಾಸನಂ |
ಗರರೇ ಶೋಚಿಸೆನೀಗಳಾಂ ನಿಹತಮಾದಾಬಂಧುಸಂದೋಹಕಂ ||
ಕರಮುಶ್ರಾವ್ಯಮಿದೆಂಬ ಪೊಲ್ಲದನದಾವಂ ಕರ್ಣನೊಳ್ ಗೆಯ್ದನೋ |
ಧುರದೊಳ್ ಸಾಹಸದಿಂದಮಾದುರುಳನಂ ನಾನಿಂದು ಕೊಂದಿಕ್ಕುವೆಂ ||

**ಗಾಂಧಾರಿ**—ಕಣ್ಣೀರ್ವಿಡುವುದನೊರ್ಚ್ಚಣಂ ಸಡಿಲ್ಚು.

**ಧೃತರಾಷ್ಟ್ರಂ**—ಕಣ್ಬನಿಗಳಂ ಚಣಮೊರಸು

**ದುರ್ಯೋಧನಂ**—ತಾತ!

ಮಾನನಿಧಿ ಮದುದ್ದೇಶದೆ |
ತಾನಸುವಿಡುವಂದು ತಡೆಯನಾವನುಮವನಂ ||

ಅನಾತನನುದ್ದೇಶಿಸಿ |
ದೀನಂ ಕಣ್ಣೀರ್ವಿಡುತ್ತುಮಿರೆ ತಡೆವುದಿದೇಂ ||೧೩೭||

ಸೂತ! ಎಮ್ಮ ಕುಲಕೆ ವಿನಾಶಕಮುಂ ಊಹಿಸಲುಮರಿದೆನಿಪುದುಂ ಆದೀಯೆಸಕಮಂ ಅದಾವನೆಸಗಿದನಕ್ಕುಂ?

**ಸೂತಂ**—ಆಯುಷ್ಮಂತನೆ! ಲೋಕವಿಂತು ಗಡ ನುಡಿಗುಂ—

ಕ್ಷಿತಿಯೊಳಗೆ ಪೂಣ್ದ ಚಕ್ರಂ |
ಹತನಾದಂ ಚಕ್ರಧರನ ಸಾರಥ್ಯದೆ ದ ||
ರ್ಪಿತನಾಗೆಮ್ಮಯ ಸೇನೆಗೆ |
ಕೃತಾಂತನೆನಿಸಿದ ಕಿರೀಟಿಯೆಚ್ಚಂಬುಗಳಿಂ ||೧೩೮||

**ದುರ್ಯೋಧನಂ**—ಅಹಹ! ಕಷ್ಟಂಕಷ್ಟಂ!

ಆಕರ್ಣನ ವಿಲಸನ್ಮುಖ |
ರಾಕಾಹಿಮಕರನ ನೆನೆಪಿನಿಂ ಮಸಗಿದ ಮ ||
ಚ್ಛೋಕಾಂಬುಧಿಯುಂ ಕ್ರೋಧೋ |
ದ್ರೇಕದ ಬಡಬಾಗ್ನಿಯಿಂದು ಸಬ್ರನೆ ಪೀರ್ಗುಂ ||೧೩೯||

**ಮಾತೆ! ತಾತ! ನೀಮೆನಗೆ ಒಸೆಯಿಂ.**

ಸುಡುತಿರ್ದಪುದಿದು ನನ್ನಂ |
ತಡೆಯಲ್ಕಸದಳಮೆನಿಪ್ಪ ದುಃಖಜ್ವಲನಂ ||
ಮುಡಿವುದು ಸಮುಮೆನಿಪೊಡಮೆನ |
ಗಡಸಿದ ಸಂಶಯದೆ ಬವರಮೇ ವರಮೆನಿಕುಂ ||೧೪೦||

**ಧೃತರಾಷ್ಟ್ರಂ**—(ದುರ್ಯೋಧನನಂ ತಬ್ಬಿಗೆಯ್ದು ಅಬ್ವಂ).

ತನಯಾ ಸಂಶಯಮೇ ಗಡಾ ಸಮನಿಕುಂ ಸಾಸಂಗಳೊಳ್ ನಿಕ್ಕುವಂ | ಮನಮುದ್ವೇಗದಿನಬ್ಬುಗುಂ ಬಗೆದೊಡೀಗಳ್ ಭೀಮನಂ

ಭೀಮನಂ || ಇನಿಸುಂ ನಿನ್ನೆಸಕಂಗಳಲ್ಲಿ ಕವಡಿಲ್ಲಂ ಮಾನಶೌಂಡಾ
ದ್ವಿಷ | ಜ್ಜನದಾಯೋಧನದಲ್ಲಿ ಬಂಚನೆಯುಳುಂಬಂ ಕೆಟ್ಟೆನಾನಕ್ಕಟಾ||

**ಗಾಂಧಾರಿ**—ನೂರ್ವರನೆನ್ನ ಮಕ್ಕಳನಾವನೊಕ್ಕಲಿಕ್ಕಿದಂ ನೀನಾ ಭೀಮನೊಡನೆಯೆ ಬವರಮಱಸುವೆ.

**ದುರ್ಯೋಧನಂ**—ಮಾತೆ! ಭೀಮನಿರ್ಕೆ,

ಮನಕಿಷ್ಟಾರ್ಥಮೊಡಲ್ಗೆ ಚಂದನರಸಂ ನಿನ್ನೀಕ್ಷಣಂಗಳ್ಗೆ ತ |
ಣ್ಣನೆ ರಾಜಿಪ್ಪ ಸುಧಾಕರಂ ಜನನಿಯೇ ನಿನ್ನೊಲ್ಮೆವೆತ್ತಾತ್ಮಜಂ ||
ಜನಕಾ ನಿನ್ನ ನಯೋಪದೇಶವೆಸೆವಂತೇವಾಸಿಯಾದಂಗರಾ ! ಜನ
ನಾವಂ ಖಲಪಾಪಿಯೆಚ್ಚನವನೊಳ್ ನನ್ನಂಬು ಬೀೞ್ಗೀಗಳೇ ||೧೪೨||

ಸೂತ! ಸಾಲ್ಗುಮೀಗಳ್; ತಳ್ವುವುದಱಿನೇಂ? ಪಣ್ಣಿದೆನ್ನ ತೇರಂ ತಾರ (ಚಿಂತಿಸಿ) ನೀನುಂ ಪಾಂಡವರ್ಗಂಜುವಂ; ನಿಲ್, ಗದಾಮಾತ್ರಸಹಾಯನಾಗಿಯೆ ರಣರಂಗಮನೆಯ್ದುವೆಂ.

**ಸೂತಂ**—ಆಯುಷ್ಮಂತನೆ! ಸಾಲ್ಗುಂ; ಬೇಱೆಯೆಣಿಪುದಱಿನೇಂ? ಇದೆ ಬಂದೆನಾಂ (ಎಂದು ತೆರಳ್ದಂ).

**ಧೃತರಾಷ್ಟ್ರಂ**—ವತ್ಸ! ದುರ್ಯೋಧನ! ನಿನ್ನೀಯುದ್ಯಮಮೆಮ್ಮನುರಿಪಲ್ಕೆ ದಿಡಮಾಗಿಯೇ ಇರ್ಪೊಡೆ, ಬಱಿಯೊಳಿರ್ಪ ತುಱಿಲಾಳ್ಗಳೊಳ್ ಒರ್ವನಂ ಪಡೆವಳತನದೊಳಭಿಷೇಚಿಸು.

**ದುರ್ಯೋಧನಂ**—ಅಭಿಷೇಚಿಸಿದೆನೆ.

**ಗಾಂಧಾರಿ**—ವತ್ಸ! ಆದಾವನಂ? ಆನಾವನೊಳ್ ಈಜಯಾಶೆಯಂ ಅವಲಂಬಿಪೆನೋ ಅವನಾವಂ?

**ಧೃತರಾಷ್ಟ್ರಂ**— ಶಲ್ಯನನೋ ಮೇಣ್ ಅಶ್ವತ್ಥಾಮನನೋ?

**ಸಂಜಯಂ**—ಅಹಹ ಕಷ್ಟಂ!

ಹತನಾಗಿರೆ ಭೀಷ್ಮಂ ಗುರು |
ಹತನಾಗಿರೆಯುಂಗನೃಪತಿ ಹತನಾಗಿರೆಯುಂ ||
ಕ್ಷಿತಿಪನೆ ಶಲ್ಯಂ ಪಾಂಡುವ |
ಸುತರಂ ತಾಂ ಗೆಲ್ವನೆಂದು ಪಿರಿದಾಸೆ ಗಡಾ ||೧೪೩||

**ದುರ್ಯೋಧನಂ**—ಶಲ್ಯನಿಂದೇಂ ಅಶ್ವತ್ಥಾಮನಿಂದೇಂ ?

ಅನುಗೊಳಿಸು ಕರ್ಣನಾಲಿಂ |
ಗನಮಂ ಮೇಣ್ ಪಾರ್ಥನಸುಗಳಂ ಕೊಳ್ಳೆಂದಾ ||
ನನವರತಂ ಸೂಸುವ ಕ |
ಣ್ಬನಿಗಳನೀಯೊಡಲನೀಗಳಭಿಷೇಚಿಸಿದೆಂ ||೧೪೪||

(ನೇಪಥ್ಯದಲ್ಲಿ) ಕೌರವಸೇನೆಯೊಳ್ ಪ್ರಧಾನರೆನಿಸಿರ್ಪ್ಪಲೆ ಯೋಧರಿರಾ! ಎಮ್ಮಂ ಕಂಡು ಭಯದಿನತ್ತಿತ್ತಲೋಡುವುದೇಕೆ ? ಸುಯೋಧನನೆಲ್ಲಿರ್ದಪಂ ? ನೀವದಂ ಪೇೞಿಂ.

(ಎಲ್ಲರುಮಾಲಿಪರ್)

**ಸೂತಂ**—(ಸಂಭ್ರಾಂತನಾಗಿ ಪೊಕ್ಕು) ಆಯುಷ್ಮಂತನೆ !

ತೇರೊಂದನೇಱಿಯುತ್ತಿ |
ತ್ತಾರಯ್ಯುತೆ ನಿನ್ನನಿರ್ವರೆಯ್ತಂದಿರ್ಪ್ಪರ್ ||

**ಎಲ್ಲರುಂ**—ಆವಂ ? ಪೆಸರಾವಂ ?

**ಸೂತಂ**—

ಆರಾಧೇಯಾಹಿತನುಂ |
ಕ್ರೂರಂ ವೃಕಚೇಷ್ಟಿತಂ ವೃಕೋದರನವನುಂ ||೧೪೫||

**ಗಾಂಧಾರಿ**—(ಭಯಂಬೆರಸು) ವತ್ಸ ! ಈಗಳೀಸಂದರ್ಭದೊಳ್ ಗತಿಯೇಂ ?

**ದುರ್ಯೋಧನಂ**—ಮಾತೆ ! ಗದೆಯಿದು ಬೞಿಯೊಳೇ ಇರ್ದಪುದಲ್ತೇ ?

**ಗಾಂಧಾರಿ**—ವತ್ಸ! ಹಾಹಾ! ಈಗಳ್ ಪಾಪಿಯುತ್ತಣಿಂ ಕೆಟ್ಟೆಂ.

**ದುರ್ಯೋಧನಂ**—ಇನ್ನೀಗಳ್ ತಳ್ವುವುದಾಗದು. ಸಂಜಯ! ನೀನಿವರನಿರ್ವ್ವರಂ ರಥಮೇಱಿಸಿ ಸಿವಿರಕೆ ಪೊಱಮಡು. ಎಮ್ಮಱಲಂ ಕಳೆವ ಒಲವಿನ ಬವರಂ ಬಂದೊದವಿತು.

**ಧೃತರಾಷ್ಟ್ರಂ**—ವತ್ಸ! ಒಚ್ಚ್ರಣಂ ಪ್ರತೀಕ್ಷಿಸು; ಇವರಿರ್ವ್ವರ ಬಗೆಯನಱಿವೆಂ.

**ದುರ್ಯೋಧನಂ**—ತಂದೆಯೆ! ಈಯಱಿವಿನಿಂದೇಂ?

(ಧೃತರಾಷ್ಟ್ರನುಂ ಗಾಂಧಾರಿಯುಂ ಇನಿಸುದೂರಮೆಯ್ದಿ ನಿಲ್ವರ್)

(ಬೞಿಕೆ ರಥಾರೂಢರ್ ಭೀಮಾರ್ಜುನರ್ ಪುಗುವರ್).

**ಭೀಮಂ**—ಎಲೆ ದುರ್ಯೋಧನಾನುಜೀವಿಗಳಿರಾ! ಅದೇತರ್ಕೆ ಸಂಭ್ರಮದಿಂ ಎಂತೆಂತೊ ನೀವೆಡೆಯಾಡುವಿರ್? ಎಮ್ಮ ಬಂದುದನಱಿಪಿಂ.

ಕವಡಿಂ ಜೂದಾಡಿದಾ ಮೇಣರಗಿನ ಮನೆಯೊಳ್ ಚುರ್ಚಿದಂ ಗರ್ವಿಯಾವಂ | ಪವನಂ ಕೃಷ್ಣಾಶಿರೋಜಾಂಬರಮೆೞೆವುದಱೊಳ್ ನಾವದಾವಂಗೆ ತೊೞ್ತರ್ || ನೃವರಂ ದುಶ್ಶಾಸನಾದ್ಯಾನುಜಶತಗುರು ಮೇಣ್ ಕರ್ಣಸನ್ಮಿತ್ರನಾಕೌ | ರವನೆತ್ತಲ್ ಪೇೞಿಮಿಲ್ಲಂ ಕಿನಿಸೆಮಗವನಂ ನೋಡಲಾಂ ಬಂದೆವಿರ್ವ್ವರ್ ||೧೪೭||

**ಧೃತರಾಷ್ಟ್ರಂ**—ಸಂಜಯ! ಪಾಪಿಯ ಮಾತಿನುಪಕ್ರಮಂ ಕೂರಿತಲ್ತೆ?

**ಸಂಜಯಂ**—ಕಾರ್ಯದಿನನಿಷ್ಟಮನೆಲ್ಲಮಂ ಗೆಯ್ದು ತಾನೀಗಳ್ ಮಾತಿನಿಂ ಸಂಕಟಂಗೊಳಿಪಂ.

**ದುರ್ಯೋಧನಂ**—ಸೂತ! ಪೋಗಿ ಪೇೞವರ್ಗೆ, ಇವನಿಲ್ಲಿರ್ಪ್ಪನೆಂದು.

**ಸೂತಂ**—(ಬೞಿಸಾರ್ದು) ಎಲೆ ಭೀಮಾರ್ಜುನರಿರಾ! ಇದೆ ಇತ್ತಲ್ ಮಹಾರಾಜಂ ತಾಯ್ತಂದೆವಿರ್ವ್ವಿರಸು ವಟವಿಟಪಿಯ ನೆೞಲೊಳ್ ಕುಳ್ಳಿರ್ದ್ದಪಂ.

**ಅರ್ಜುನಂ**—(ಭೀಮನಂ ಕುಱಿತು) ಆರ್ಯ! ಪ್ರಸನ್ನನಾಗು. ಪುತ್ರಶೋಕಪರಿಪೀಡಿತರಂ ಮಾತಾಪಿತೃಗಳಂ ನಾಂ ಕಂಡು ಮತ್ತೆ ಪಿರಿದುಮುೞಲಿಪುದು ತಕ್ಕುದಲ್ತು; ಅದಱಿಂ ಪೆಡಮುಗುೞ್ದು ಪೋಪಂ.

**ಭೀಮಂ**—ಗಾಂಪ! ಸದಾಚಾರಸಂಪ್ರದಾಯಮಂ ಮೀಱಲಾಗದು. ಪಿರಿಯರಂ ಅಭಿವಂದಿಸದೆ ಪೋಪುದು ತರನಲ್ತು.

(ಎಂದಿರ್ವ್ವರುಂ ರಥದತ್ತಣಿನಿೞಿವುದನಭಿನಯಿಪರ್)

**ಭೀಮಂ**—ಸಂಜಯ! ತಾಯ್ತಂದೆವಿರ್ಗ್ಗೆ ವಂದನೆಯನಱಿಪು, ಮೇಣ್ ನಿಲ್; ಆವೆ ಅಱಿಪುವೆವು. (ಅರ್ಜುನನಂ ನೋಡಿ) ವತ್ಸ! ತಮ್ಮೆಸಕಮಂ ಪೆಸರುಮಂ ಅಱಿಕೆಗೆಯ್ದು ಪಿರಿಯರ್ಗೆ ವಂದನೆಯನೆಸಗಲ್ವೇೞ್ಕುಂ.

**ಅರ್ಜುನಂ**—(ಬೞಿಸಾರ್ದು) ತಾತ! ಮಾತೆ!

ಪಗೆಗಳನೆಲ್ಲರಂ ಜಯಿಸುವಾಸೆಯನಾವನೊಳೊಲ್ದು ನಿಮ್ಮ ಸೂ | ನುಗಳಿರಿಸಿರ್ದ್ದರೋ ಜಗಮನಾವನಹಂಕೃತಿಯಿಂ ತೃಣಕ್ಕೆ ತಾಂ || ಬಗೆದನೊ ಸಂಗರಾಂಗಣದೊಳಂತಹ ಕರ್ಣನನೆಚ್ಚು ಕೊಂದಿವಂ | ನೆಗೞ್ದಪನರ್ಜುನಂ ನಿಮಗೆ ವಂದನೆಯಂ ಮಿಗೆ ಪಾಂಡುನಂದನಂ ||೧೪೭||

**ಭೀಮಂ**—

ಕುರುಕುಲಮಂ ಚೂರ್ಣಿಸಿದಂ |
ನೆಱೆ ದುಶ್ಶಾಸನನ ನೆತ್ತರಿಂ ಮದಿಸಿದನೀ ||
ದುರುಯೋಧನನೂರುಗಳಂ |
ಮುಱಿವಂ ಶಿರದಿಂದೆ ನಿಮಗೆ ಭೀಮಂ ಮಣಿವಂ ||೧೪೮||

**ಧೃತರಾಷ್ಟ್ರಂ**—ಎಲೆ ದುರಾತ್ಮ! ವೃಕೋದರ! ನೀನೊರ್ವನೆ ಪಗೆಗಳ್ಗೆ ಕೇಡೆಸಗಿದನಲ್ತು. ಕ್ಷತ್ರಿಯಜಾತಿಯಿರ್ಪುದರಿಂದಿನಿಂ ಬೀರರ್ ಬವರದೊಳ್ ಜಯಿಪರುಂ ಜಿತರುಂ ಹತರುಮಪ್ಪುದುಂಟು; ಆದೊಡಮದೇನೆಂದು ನೀನಿಂತು ಜಃಚುತ್ತೆ ಎಮ್ಮನುಬ್ಬೆಗಂಗೊಳಿಪೆ?

**ಭೀಮಂ**—ತಾತ! ಕನಲ್ವುದಾಗದು.

ಕುರುಳೀಟ್ದೀಡಾಡಿಯುಯ್ದ್ವಮ್ಮಯ ವಧುವನದಾರ್ ತ್ವತ್ಸಭಾಸ್ಥಾನದೊಳ್ ಕಂ| ಡರವರ್ ಕ್ರೋಧಾಗ್ನಿಯೊಳ್ ತಾಂ ಶಲಭಕುಲದ ವೋಲೆಲ್ಲರುಂ ದಗ್ಧರಾದರ್ || ಒರೆವೆಂ ನಿನ್ನಲ್ಲಿ ನಾನೀಕತದೆ ಭುಜಬಲ ಶ್ಲಾಘೆಯಿಂ ದರ್ಪದಿಂದ | ಲ್ತಱು ತಾತಾ ಪುತ್ರಪೌತ್ರರ್ ವಿರಚಿಸಿದ ಮಹಾಕಾರ್ಯದೊಳ್ ಸಾಕ್ಷಿ ನೀನೇ ||೧೪೯||

**ದುರ್ಯೋಧನಂ**—(ಬಟಿಸಾರ್ದು) ಫಡಫಡ ವಾಯುಪುತ್ರ! ಇದೇನಿಂತು ಮುತ್ತರಾಯನ ಮುಂತೆ ತೆಗಟುತಕ್ಕುದುಮಂ ಸ್ವಕಾರ್ಯಮಂ ಪೊಗಟ್ದಪೆ? ಅಂತಲ್ಲದೆಯುಂ—

ಜನಪರ್ ನೀಂ ನೀನುಮಾ ಭೂಪತಿಪಶುವವರಿನ್ನಿರ್ವರಿರ್ಪುದರಿಂದು ನಿಮ್ಮಂ | ಗನೆ ಜೂದುಂದೊಟ್ಟುವಳ್ ನಾಂ ಬೆಸಸೆ ಭುವನಪಂ ಮಂಡೆಯಿಾಟ್ದುಯ್ದಳಾದಳ್ || ಜನಿಸಿರ್ಪ್ಪೀವೈರದೊಳ್ ಪೇಟ್ ಹತರೆನಿಸಿದ ಭೂಪಾಲರೇಂತಪ್ಪುಗೆಯ್ದರ್ | ನಿನಗೀಗಳ್ ದರ್ಪಮೋ ಗೆಲ್ಲದೆಯೆ ಭುಜಬಲೋತ್ಸೇಕದಿಂ ಕೊರ್ವಿದೆನ್ನಂ ||೧೫೦||

**ಭೀಮಂ**—(ಕ್ರೋಧಂಗೊಂಡು ಗದೆಯನೆತ್ತಿ) ಎಲೆ ದುರಾತ್ಮನೆ! ಇವನಿಲ್ಲವೆನಿಪೆಂ.

**ಅರ್ಜುನಂ**—ಆರ್ಯ! ಇವನೊಳ್ ಕೋಪಂಗೊಳ್ವುದಱಿಂದೇಂ?

ಒಡರಿಪನಿವನಪ್ರಿಯಮಂ |
ನುಡಿಯೊಳ್ ಕೃತಿ ಕೃತಿಯೊಳಲ್ತು ನೂರ್ವರ್ ಸಹಜರ್ ||

ಮುಡಿದಿರಲಡಸಿದ ದುಗುಡದೆ |
ಕಡು ಜಱುಚುವನೆಮಗೆ ಬಾಧೆಯೇನಿದಱಿಂದಂ ||೧೫೧||

**ಭೀಮಂ**—ಎಲೆ ಎಲೆ ಭರತಕುಲಕಳಂಕ!

ಪೊಯೆ ನನ್ನೀಗದೆಯುಗ್ರದಿಂ ಪಟಪಟೆಂದೆಲ್ವೋಳಿ ನುಚ್ಚುಗ್ಗಪ್ಪ ನಿ |
ನ್ನಯ ದೇಹಕ್ಕೆಲೆಕರ್ಕಶಪ್ರಲಪಿತಾ ಪ್ರತ್ಯೂಹಮಂ ನಿನ್ನ ಮಾ ||
ತೆಯುಮೀತಾತನುಮಿಂದೊಡರ್ಚ್ಚದೊಡೆ ನೀಂ ದುಶ್ಶಾಸನಂ ಪೋದ ದಾ |
ರಿಯನುದ್ದೇಶಿಸಿಯೆಯ್ದುಲೀಗಳೆ ವಲಂ ಕೊಂದಿಕ್ಕನೇ ನಿನ್ನನಾಂ ||

ಅಲ್ಲದೆಯುಮೆಲೆ ಮೂಢ!

ಕರಿ ಯುಷ್ಮತ್ಕುಲಪದ್ಮಕಾನನಕೆನಿಪ್ಪೀಭೀಮಸೇನಂ ಕನ |
ಲ್ದಿರೆಯುಂ ಶೋಕದೆ ನೀಂ ವಧೂಜನದವೋಲ್ ಕಣ್ಣೀರ್ಗಳಂ ಬಿಟ್ಟುದಾ || ಪರಿಯೊಳ್ ತಮ್ಮನ ವಕ್ಷಮಂ ಬಗಿದುದಂ ಕಣ್ಣಾಱೆ ನೀಂ ಕಂಡುದೆಂ | ಬೆರಡುಂ ಕಾರಣಮಾದುವಲ್ತೆ ಫಡ ನೀಂ ರಾಜಾಧಮಂ ಜೀವಿಸಲ್ ||೧೫೨||

**ದುರ್ಯೋಧನಂ**—ದುರಾತ್ಮ! ಭರತಕುಲಾಧಮ! ದ್ಯೂತದಾಸ! ಪಾಂಡವಪಶು! ನಾಂ ನಿನ್ನವೋಲ್ ಜಱುಚುವುದಱೊಳ್ ಬಿತ್ತಿಗನಲ್ತು.

ಮೆಱೆವೆನ್ನಯ ಗದೆಯಿಂ ಸೀ |
ಳ್ದುರದೆಲ್ವುಗಳೋಳಿ ಭೀಷಣಂ ಭೂಷಣಮಾ ||
ಗಿರೆಯುಱದೆ ರಣಾಂಗಣದೊಳ |
ಗೊಱಗಿದನಂ ನಿನ್ನನೀಕ್ಷಿಕುಂ ಬಂಧುಜನಂ ||೧೫೩||

**ಭೀಮಂ**—(ನಕ್ಕು) ಇಂತಿರ್ಪೊಡೆ ನಿನ್ನ ನುಡಿ ನಂಬತಕ್ಕುದು. ಅದಱಿಂ ಪತ್ತೆಸಾರ್ದದನೆ ಪೇಟ್ವೆಂ. ಇದು ನಮ್ಮಣ್ಣತಮ್ಮಂದಿರೆಲ್ಲರ ನಿಶ್ಚಯಂ.

ಮೆಱೆವಿತ್ತೋಳಿಂದೆ ಬೀಸಿಟ್ಟಲಘುಗದೆಯ ಘಾತಕ್ಕೆ ನಿನ್ನೂರುಗಳ್ ಪೋ | ಟ್ಟಿರೆ ನಿನ್ನೀಮಂಡೆಯೊಳ್ ಕ್ರೂರನೆ ಬೆಳಗೆ ಜನಂ

ನೋಟ್ಪನಂ ನಾಳೆ ಕಾಲಿ || ಟ್ಟುಱಿ ನೀಂ ಮುಂತಪ್ಪ ಸೋದರ್ಯರ ವಿದಳನದಿಂ ಸೋರ್ವ ರಕ್ತಾ ಘನಾದ್ರ್ಯಂ | ಪೊರೆದೊಪ್ಪಲ್ ಚಂದನಂ ಬೋಲುಗುರ್ದುದಿವರವಾಂ ಕೂರಳಂಕಾರವಾಂಪೆಂ ||೧೫೫||

(ನೇಪಥ್ಯದೊಳ್) ಎಲೆಎಲೆ ಭೀಮಾರ್ಜುನರಿರಾ! ಇದೆ ಪಗೆವಿಂಡ ನೆಲ್ಲಮನೊಕ್ಕಲಿಕ್ಕಿ ಬೀರದಿಂ ಪರಶುರಾಮನಭಿರಾಮಮಂ ಜಸಮನಾ ಕ್ರಮಿಸಿ ದೆಸೆದೆಸೆಯೊಳಿರ್ಪ್ಪ ದರ್ಪೋದ್ಧತಮಂ ರಿಪುಜನಮಂ ಪ್ರತಾಪ ದಿಂ ತಾಪಂಗೊಳಿಸಿ ಮೆಱೆವನಜಾತಶತ್ರುವೀತಂ ಶ್ರೀಮದ್ಯುಧಿಷ್ಠಿರ ಮಹಾರಾಜಂ ಆಜ್ಞಾಪಿಸುವಂ.

ಇರ್ವ್ವರುಂ—(ಕೇಳ್ದು) ಆರ್ಯನೇನೆಂದಾಜ್ಞಾಪಿಸುವಂ?

(ಮತ್ತೆ ನೇಪಥ್ಯದೊಳ್)

ಇಡುಗಾಪ್ತರ್ ವಹ್ನಿಯೊಳ್ ಸಂಗರಹತರೊಡಲಂ ಬಾಷ್ಪಮಿ ಶ್ರಾಂಬುವಂ ತಾಂ | ಕುಡುಗೆಂತೋ ಬಾಂಧವರ್ ಬಾಂಧವಜನಕೆ ಹತರ್ ಬಿಟ್ಟಿರಲ್ ದುರ್ಗಮಾಗಿ || ಪ್ಪೆಡೆಯಲ್ಲಾರಯ್ಗೆ ಗೃಧ್ರಪ್ರಕರ ವಿದಳಿತಜ್ಞಾತಿದೇಹಂಗಳಂ ತಾಂ | ಪಡೆದಂ ಪೊಟ್ಟಸ್ತಮಂ ಶತ್ರುಗ ಳೊಡನಿವನೊತ್ರಾಣದೊಳ್ ಸೇರ್ಗೆ ಸೈನ್ಯಂ ||೧೫೬||

ಇರ್ವ್ವರುಂ—ಆರ್ಯನಾಜ್ಞಾಪಿಸಿದಂತಕ್ಕೆ (ಎಂದು ತೆರಳ್ದರ್).

(ನೇಪಥ್ಯದೊಳ್) ಎಲವೆಲವೊ! ಗಾಂಡೀವವೆಟಿವುದಱೊಳ್ ಬಾಹುಶಾಲಿಯೆನಿಸಿರ್ಪ್ಪರ್ಜುನ! ಈಗಳದೆತ್ತಣ್ಗೆ ಪೋದಪೆ?

ಇರೆ ಕೋಪಂ ಕರ್ಣನಲ್ಲಿನ್ನೆಗಮಿದನುಟಿದೆಂ ನಿಮ್ಮನೀಗೆಲ್ವ ಬಿಲ್ಲಂ | ಮೆಱೆದೈ ಮಾಶೌರ್ಯಮಂ ಸಾಸಿಗರಿರದ ವನಂಬೋಲ್ವ ಸಂ ಗ್ರಾಮದೊಳ್ ನೀಂ || ಪರಮಾಸ್ತ್ರಂಬಿಟ್ಟ ತಾತಂಗರಿ ನೆಗಟ್ದ ಶಿರ ಸ್ಸ್ಪರ್ಶಮಂ ದ್ರೋಣಜಾತಂ | ಸ್ಮರಣಂಗೊಂಡೆಯ್ದಿದೆಂ ಪಾಂಡವ ಲಯಶಿಖಿ ಪಾಂಚಾಲಸೇನಾಂತಕಂ ನಾಂ ||೧೫೭||

**ಧೃತರಾಷ್ಟ್ರಂ**—(ಕೇಳ್ದು ಸಂತಸಂಗೊಂಡು) ವತ್ಸ ದುರ್ಯೋಧನ! ಇದೆ, ತಂದೆಗಂ ಮಿಗಿಲೆನಿಪ ಶಿಕ್ಷೆಯುಳ್ಳನುಂ ಅಮರ್ದುಣಿಗಳ್ಗೆ ಸಮನುಂ ಮಹಾತ್ಮನುಮಾದ ಅಶ್ವತ್ಥಾಮನಿವಂ ದ್ರೋಣಂಗೆ ಸಮನಿಸಿದ ಪರಿಭವದಿಂ ಮಸಗಿದ ಕ್ರೋಧಾಗ್ನಿಯಿಂದೆ ಪಜ್ಜಳಿಸುತೆಯ್ತಂದಂ; ಆದಱಿಂ ನೀನಿದಿರ್ಗೊಂಡೀತನಂ ಮನ್ನಿಸು.

**ಗಾಂಧಾರಿ**— ವತ್ಸ! ಈಮಹಾಭಾಗನನಿದಿರ್ಗೊಳ್.

**ದುರ್ಯೋಧನಂ**—(ತಿರಸ್ಕಾರಭಾವದಿಂ) ತಾತ! ಮಾತೆ! ಕರ್ಣನ ವಧೆಯನೇ ಬಯಸುತಿರ್ದ್ದನಂ ವ್ಯರ್ಥಮಪ್ಪಿನಂ ಹರಯುಮಂ ಅಸ್ತ್ರಶಿಕ್ಷೆಯುಂ ಮೇಣ್ ಶಕ್ತಿಭರಮುಂ ಪಡೆದನುಮಾದಿವನಿಂದೇಂ?

**ಧೃತರಾಷ್ಟ್ರಂ**—ವತ್ಸ! ಈಮೊಟ್ಟನೊಳ್ ಪರಾಕ್ರಮಶಾಲಿಗಳ್ಗಂತಪ್ಪಗ್ಗ ಬಿಱುಮಾತಿನಿಂ ಅನನುರಾಗಮನೊಡರ್ಚುವುದು ನಿನಗೆ ಉಚಿತಮಲ್ತು.

**ಅಶ್ವತ್ಥಾಮಂ**—(ಪೊಕ್ಕು) ಎಲೆ ಪ್ರಭು ಕೌರವೇಂದ್ರ!

ಸವಿಮಾತಂ ಕರ್ಣನೇನಂ ಮಿಗೆ ಕಥಿಸಿದನೋ ಕರ್ಣಕಾನಂದಮಪ್ಪಂ | ತವನೇನಂ ಗೆಯ್ದನೋ ನಿಚ್ಚಮುಮನುವರದೊಳ್ ನೀನವಂ ಬಲ್ಲೆಯಲ್ತೇ || ಇವನಶ್ವತ್ಥಾಮನೀಗಳ್ ರಿಪುಕುಲಮನಿದಿರ್ಚುತ್ತೆ ಬಿಲ್ಲಾಂತು ನಿಲ್ವಂ | ನೃಪರಾ ಶತ್ರುಪ್ರತೀಕಾರಮನೆಸಗಿದುದಿಲ್ಲೆಂಬ ಸಂತಾಪಮಂ ಮಾಣ್ ||

**ದುರ್ಯೋಧನಂ**—(ಅಸೂಯೆಯಿಂ) ಆಚಾರ್ಯಪುತ್ರ!

ಅಂಗಾಧಿಪನೞಿದ ಬೞಿ |
ಕ್ಕಂ ಗಡ ನೀಂ ಕಾದವೇೞ್ಪುದೆನ್ನೞಿವುದುಮಂ ||
ಸಂಗರದೆ ನಿರೀಕ್ಷಿಸು ನೀ |
ನಂಗಾಧಿಪನಾವನೀಸುಯೋಧನನಾವಂ ||೧೫೯||

**ಅಶ್ವತ್ಥಾಮಂ**—ಏನಿದು? ಈಗಳುಂ ಕರ್ಣಪಕ್ಷಪಾತದತ್ತಣಿಂ ಎಮ್ಮ ವಿಷಯದೊಳ್ ಮತ್ತೆಯುಮದುವೆ ತಿರಸ್ಕಾರಮೋ? ರಾಯನೆ! ಇಂತಕ್ಕೆ. ನೀಂ ಪದುಳಮಿರು. (ಎಂದು ಪೋಪಂ.)

**ಧೃತರಾಷ್ಟ್ರಂ**—ವತ್ಸ! ಇದೇನಱಿಯಮೆ ನಿನತು? ಈವೇಳೆಯೊಳಂ ಮಹಾರಣಶೂರಂಗಿಂತಪ್ಪಂಗಶ್ವತ್ಥಾಮಂಗಂ ಬಿಱುನುಡಿಯಿಂದ ಮಪ್ರೀತಿಯನೊಡಚ್ಚುರ್ವೆ?

**ದುರ್ಯೋಧನಂ**—ಆನಿವನ ವಿಷಯದೊಳಪ್ರಿಯಮಂ ಮೇಣ್ ಸಟೆಯನೇನನಾಡಿದೆಂ? ಇದೇಂ ಕೋಪಕ್ಕೆಡೆಯಲ್ತೋ? ನೋಡು—

ಅಱಿಯಲ್ಕಾವನ ವ್ಯೈಮೆಯುಂ ನೆಱಿಯರೋ ಬಿಲ್ಲಾಂತ ರಾಜನ್ಯರುಂ|
ಧುರದೊಳ್ ನಿಮ್ಮಯ ಭಾಗ್ಯದೋಷದಿನದಾವಂ ಮಿಟ್ಟುದುತ್ತಾದನೋ ||
ಇರುತೆನ್ನಗ್ರದೊಳೆನ್ನ ನೇಹಿಗನನಾಅಂಗಾಧಿರಾಜೇಂದ್ರನಂ |
ಜಱೆಯುತ್ತುಂ ನುಡಿವಂ ಕಿರೀಟಿಗವಮಂಗಂ ಪೇೞ್ ವಿಶೇಷಂ ಗಡೇಂ ||

**ಧೃತರಾಷ್ಟ್ರಂ**—ವತ್ಸ! ಈವಿಷಯದೊಳ್ ನಿನ್ನ ತಪ್ಪೇನಿರ್ಕುಂ? ಭರತಕುಲದ ತೀರಮೆ ಇದು. ಗಾಂಧಾರಿ! ಸಂಜಯ! ಮಂದಭಾಗ್ಯಂ ನಾನೇವೆನಿದರ್ಕ್ಕೆ? (ಚಿಂತಿಸಿ, ಆತ್ಮಗತಂ) ಅಕ್ಕೆ; ಇಂತು ಗಡ? (ಪ್ರಕಾಶಂ) ಸಂಜಯ! ಪೇೞನ್ನ ನುಡಿಯಿಂ ದ್ರೋಣಪುತ್ರಂಗೆ ಅಶ್ವತ್ಥಾಮಂಗೆ:—

ವತ್ಸ!

ನೆನೆಯಾ ನೀನಿವನಿಂದೆ ಕೂಡಿ ಚಿರಕಾಲಂ ಸ್ತನ್ಯಮಿಂಟಿರ್ದ್ದುದಂ | ನೆನೆಯಾ ನೀಂ ಪೊರಳಾಡೆ ಬಾಲ್ಯದೆ ಮಸುಳ್ದಿನ್ನುಟ್ಟ ಕೌಶೇಯಮಂ || ಅನುಜಾತರ್ ಮೃತಿಯೊಂದೆ ಪೆರ್ಚ್ಚಿದಟಲಿಂ ಮೋಹಾಗ್ರಸಂಪ್ರೀತಿಯಿಂ | ದನುಗೆಟ್ಟಿಂದನೊಳೀತನೊಳ್ ನಿಱುಸದಿರ್ ನೀಂ ಶಾಶ್ವತಕ್ರೋಧಮಂ ||೧೬೧||

**ಸಂಜಯಂ**—ಸ್ವಾಮಿ ಬೆಸಸಿದಂತಕ್ಕೆ. (ಎಂದೇೞ್ವಂ)

**ಧೃತರಾಷ್ಟ್ರಂ**—ಅಲ್ಲದೆ ಪೆಱತೊಂದನಿದಂ ನೀಂ ನುಡಿಯ ವೇಟ್ಕುಂ. ಅದೇನೆನೆ—

ತೊದಟ್ವಾತಂ ಬಗೆಗೊಂಡು ನಿನ್ನ ಗುರು ಕೈಗ್ಯೆದಂ ಬಿಸುಟ್ವಂತೆಗೆ | ಯ್ದುದನಂತಪ್ಪರುಹಂಗಮುಂತಹಪರೀಭಾವಂ ಸಮಂತಾದುದಂ ||
ಅದಟಂ ಮೇಣ್ ನಿನಗುಳ್ಳ ಪೌರುಷಮನಂತಾರಯ್ದು ನಿನ್ನಂತರಂ |
ಗದೆ ದುರ್ಯೋಧನನೆಂದುದಂ ಮಱೆತು ಗೆಯ್ ಶತ್ರುಪ್ರತೀಕಾರಮಂ ||

ಎಂದು.

**ಸಂಜಯಂ**—ತಾತನಾಣತಿಯಂತೆ. (ಎಂದು ಪೋಪಂ)

**ದುರ್ಯೋಧನಂ**—ಸೂತ! ಸಾಂಗ್ರಾಮಿಕಮಂ ರಥಮನುಯ್.

**ಸೂತಂ**—ಮಹಾರಾಜನಾದೇಶಿಸಿದಂತೆ (ಎಂದು ತೆರಳ್ವಂ).

**ಧೃತರಾಷ್ಟ್ರಂ**—ಗಾಂಧಾರಿ! ಇನ್ನಾಂ ಮದ್ರಾಧಿಪತಿಶಲ್ಯನ ಸಿವಿರಮನೆ ಎಯ್ದುವಂ. ವತ್ಸ! ನೀನುಮಿಂತು ಗೆಯ್. (ಕಿವಿಯೊಳ್ ಇಂತೆಂದು ನುಡಿದು ತೆರಳ್ವಂ).

(ಎಲ್ಲರುಂ ತೆರಳ್ದರ್).

ಇಂತಿದು ಪಂಚಮಾಂಕಂ.

---

## ಷಷ್ಠಾಂಕಂ.

---

(ಬಱಿಕೆ ಪೀಠದೊಳ್ ಕುಳ್ಳಿರ್ಪ್ಪ ಯುಧಿಷ್ಠಿರನುಂ ದ್ರೌಪದಿಯುಂ ಚೇಟಿಯುಂ ಸೇವಕನುಂ ಪುಗುವರ್.)

**ಯುಧಿಷ್ಠಿರಂ**—(ಚಿಂತೆಗೊಂಡವನಂತೆ ಸುಯ್ದು)

ಘನಭೀಷ್ಮಾಂಭೋಧಿಯಂ ದಾಂಟಿದೆವು ಶಮಿತಮಾಯ್ತಿಂತೊ ಗುರ್ವಗ್ನಿಯುಂ ನಂ | ಜಿನ ಕರ್ಣವ್ಯಾಳಮುಂ ಸಂಹತಮೆನಿಸಿತು ಶಲ್ಯಂ ದಿವಕ್ಕೈದಿದಂ ಮೇಣ್ || ಇನಿಸಿರ್ಕ್ಕುಂ ಶೇಷವಿನ್ನೆಮ್ಮಯ ಜಯಕೆನೆ

ಭೀಮಂ ಮಹಾಸಾಹಸಂ ತೊ | ಟ್ಟನೆ ಗೈದಾಪೂಣ್ಕೆಯಿಂದಾಮಸು
ಭರಣದೆ ಸಂದೇಹಮೊಂದಿರ್ಪ್ಪೆವೆಲ್ಲರ್ ||೧೬೩||

**ದ್ರೌಪದಿ**—(ಕಣ್ಬನಿವೆರಸು) ಮಹಾರಾಜ ! ಪಾಂಚಾಲಿಯಿಂದ ಮಸುಭರಣದೆ ಸಂದೇಹಮೊಂದಿರ್ಪ್ಪೆವೆಂದು ಪೇೞ್ದುದಿಲ್ಲೇಕೆ?

**ಯುಧಿಷ್ಠಿರಂ**—ಪಾಂಚಾಲಿ ! ಎನ್ನಿಂದಲ್ತೇ ? (ಸೇವಕನಂ ನೋಡಿ) ಎಲೆ ತಿಳಿದವನೆ !

**ಸೇವಕಂ**—ಸ್ವಾಮಿಯಾಜ್ಞಾಪಿಸವೇೞ್ಕುಂ.

**ಯುಧಿಷ್ಠಿರಂ**—ಸಹದೇವಂಗೆ ಪೇೞ್ ; ಇಂದೆ ಪೂರ್ತಿಗೊಳಿಸಲ್ವೇಡಿದ ಕುಪಿತಭೀಮನ ಘೋರಮಂ ಪೂಣ್ಕೆಯಂ ಕೇಳ್ದು, ಕಣ್ಗೆ ಗೋಚರನಾಗದೆ ಮಱೆಗೊಂಡಿರ್ಪ್ಪ ಮಾನಿ ಕೌರವಾಧಮನ ನೆಲೆಯುನಱಿಯಲ್ಕೆ ಆಆಯೆಡೆಗಳೊಳ್ ವಾಸ್ತವಮಪ್ಪ ವಿಚಾರಮಂ ತಿಳಿವ ಅತಿನಿಪುಣಮತಿಯ ಚಾರರುಂ ಭಕ್ತಿಯುಕ್ತರ್ ಮಂತುಗಳುಂ ಆಂ ಪ್ರತ್ಯುಪಕಾರಕೆಂದೀವ ಪಣಮುಮಂ ಬಹುಮಾನಮುಮಂ ಪಡೆವರಾಗಿ ಪಟುಪಟಹಂಗಳ ಸಬುದದಿಂ ತಮ್ಮುಗ್ಗಡಣೆಯಂ ಮೆಱೆಯುತುಂ ದುರ್ಯೋಧನನ ಪಜ್ಜೆಗಳನಾರಯ್ಯುತೆ ಸ್ಯಮಂತಪಂಚಕದ ಸುತ್ತಲುಂ ಸಂಚರಿಕೆ, ಅಂತಲ್ಲದೆಯುಂ—

ಮಿಗೆ ಕೆಸಱೊಳ್ ಮೋಣ್ ಪುಟಿಲೊಳ್ |
ನಿಗೂಢಪದಮಾರ್ಗಮಱಿತವರ್ ಧೀವರರೆ ||
ಯ್ದುಗೆ ಗೋಪರ್ ಪೊದಱೊಳ್ ಚರಿ |
ಸುಗೆ ಬಳ್ಳಿಗಳೊಟ್ಟಿಗನಲ್ಲಿ ಪೊಕ್ಕೊಗ್ಗಿದವರ್ ||೧೬೪||

ಚರಿಸುಗೆ ತಮ್ಮಯ ಮೋಣ |
ನ್ಯರ ಪಜ್ಜೆಯನಱಿತ ಬಿಯದರುಂ ಪುಲಿಗಾಡೊಳ್ ||
ಚರರಱಿಯಲ್ ವಾನಪ್ರ |
ಸ್ಥರುಮಂ ಸಿದ್ಧರುಮನೆಯ್ದುಗಾಶ್ರಮತತಿಯಂ ||೧೬೫||

**ಸೇವಕಂ**—ಅಣತಿಯಂತೆ (ಎಂದೇಟ್ವಂ)

**ಯುಧಿಷ್ಠಿರಂ**—ನಿಲ್; ಇಂತುಂ ಸಹದೇವಂಗೆ ಪೇಟವೇಟ್ಕುಂ.

ಇರುತೇಕಾಂತದೊಳಳ್ಕುತುಂ ನುಡಿವರಂ ರೋಗಾರ್ತಿಯಿಂ ಕಾನನಾಂ | ತರದೊಳ್ ನಿದ್ರಿಸುತಿರ್ಪರಂ ಬಿಡದೆ ತಾವಾರಯ್ಯುವೇಟ್ಕುಂ ವಲಂ || ಧರಿಸಿರ್ಕುಂ ಮಿಗವಿಂಡದೆಲ್ಲಿ ಭಯಮಂ ಮೇಣೆಲ್ಲಿ ಚೀರ್ಗುಂ ಖಗಂ | ಮೆಟ್ಟಗುಂ ರಾಜರ ಚಿಹ್ನೆಯುಳ್ಳಡಿಗಳೆಲ್ಲಾರಯ್ವುದಂತಲ್ಲಿಯುಂ ||೧೬೬||

**ಸೇವಕಂ**—ಮಹಾಪ್ರಭು ಬೆಸಸಿದಂತೆ (ಎಂದು ಪೋಗಿ ಮಗುಟ್ದು, ಸಂತಸದಿಂ) ಸ್ವಾಮಿಯೆ! ಪಾಂಚಾಲಕಂ ಬಂದಿರ್ಪ೯ಂ.

**ಯುಧಿಷ್ಠಿರಂ**—ತಳ್ವದೆ ಪುಗಿಸು.

**ಸೇವಕಂ**—(ಪೋಗಿ ಪಾಂಚಾಲಕನೊಡನೆ ಪೊಕ್ಕು) ಪಾಂಚಾಲಕ! ಇದೆ ಮಹಾರಾಜನಿರ್ತ್ತಲಿರ್ದ್ದಪಂ. ಸನ್ನಿಧಿಯನೆಯ್ದು.

**ಪಾಂಚಾಲಕಂ**—ಮಹಾರಾಜಂಗೆ ಜಯಮಕ್ಕೆ; ಜಯಮಕ್ಕೆ. ಮಹಾರಾಜಂಗಂ ದೇವಿಗಂ ಪ್ರಿಯವಾರ್ತೆಯನಱುಪುವೆಂ.

**ಯುಧಿಷ್ಠಿರಂ**—ಅಯ್ಯ ಪಾಂಚಾಲಕ! ದುರಾತ್ಮಕನಪ್ಪ ಆ ಕೌರವಾಧಮನ ನೆಲೆ ವಿದಿತಮಾದುದೇ?

**ಪಾಂಚಾಲಕಂ**—ಮಹಾರಾಜನೆ! ನೆಲೆಯೊಂದೇ ಅಲ್ತು; ದೇವಿಯ ಕುರುಳ್ಗಳಂ ದುಗುಲಮಂ ಈಟ್ದಿಟದುದಱಿಂ ಮಹಾಪಾತಕಕ್ಕೆ ಮುಖ್ಯಬೀಜಮೆನಿಸಿದಾಕೇಡಿಗನೇ ಸಿಲ್ಕಿದಂ.

**ಯುಧಿಷ್ಠಿರಂ**—(ಹರಿಸಂಗೊಂಡು). ಅಯ್ಯ! ಎನಗೊಲವಿನ ಸುದ್ದಿಯನಱುಪಿದೆ. ಆವಂ ಕಣ್ಗೆ ಗೋಚರನಾದನೇಂ?

**ಪಾಂಚಾಲಕಂ**—ರಣಗೋಚರನಂ ಭೀಮನಂ ಬೆಸಗೊಳ್ವುದು.

**ದ್ರೌಪದಿ**—(ಭಯದಿಂ) ಅದೆಂತು ಎನ್ನ ಮನದನ್ನಂ ರಣಗೋಚರನಾಗಿರ್ಪ೯ಂ?

**ಯುಧಿಷ್ಠಿರಂ**—(ಶಂಕಿತನಾಗಿ).

ಅದಟಡಸಿದ ಭೀಮನ ವಿಷ |
ಯದೆ ನಿರ್ನೆರಮಳ್ಕಿ ಬಗೆ ವಿವೇಕಂಗಿಡುಗುಂ ||
ಗದೆವಿಡಿದವನಾರ್ಪಂ ತಿಳಿ |
ಯದನೇಂ ಶಂಕಿಸುವೆನಾದೊಡಂ ರಣಜಯದೊಳ್ ||೧೬೭||

(ದ್ರೌಪದಿಯುಂ ನೋಡಿ, ಮೊಗದ ಕಣ್ಣೀರನೊರಸಿ) ಎಲೆ ಸುಕ್ಷತ್ರಿಯೆ! ಏಕೆ ಮಱುಗುವೆ?

ಪಿರಿಯರ್ ಬಾಂಧವಭಾವಮುಂ ಪಡೆದರುಂ ಸಾಸಿರ್ವರುರ್ವೀಶರುಂ | ನೆರೆದಾಸ್ಥಾನದ ಮಧ್ಯದಲ್ಲಿಮಗೆ ಮುನ್ಮಾದಾತಿರಸ್ಕಾರಮಂ || ಅರಸೀ ನಾವಸುವಂ ವಿಸರ್ಜಿಪುದು ಮೇಣಾನೀಚದುರ್ಯೋಧನಂ | ಧುರದಲ್ಲಿಂದಟ್ಟಿವಾಂಪುದೆಂಬೆರಡಱಲ್ಲೊಂದೇ ಗಡಾ ಭಂಜಿಕುಂ ||೧೬೮||

ಒಂದುಪಕ್ಷದೊಳ್ ಸಂದೆಗಂಗೊಳವೇಟ್ಟುದೆ ಇಲ್ಲಂ.

ಇಂದೆಲ್ಲಿ ನನ್ನ ಪೂಣ್ಕೆಗೆ |
ಕುಂದಪ್ಪುದೊ ಎಂದು ಭೀತಿಗೊಂಡಾಬೀರಂ ||
ಬಂಧಿಸುವಂ ತ್ವಚ್ಚಿಕುರಮು |
ನಂದಿದನೆಟಿಯಿಸಿದ ಖಳನುಮಂ ಭಂಗಿಸುವಂ ||೧೬೯||

ಪಾಂಚಾಲಕ! ಪೇಟ್ ಪೇಟ್ ದುರಾತ್ಮನಾಕೌರವಾಧಮಂ ಅದೆಂತು ಸಿಲ್ಕಿದಂ? ಎತ್ತ? ಈಗಳ್ ಏಂ ತೊಡಗಿರ್ಕ್ಕುಂ?

**ದ್ರೌಪದಿ**—ಅಯ್ಯ! ಪೇಟ್ ಪೇಟ್.

**ಪಾಂಚಾಲಕಂ**—ಮಹಾಪ್ರಭುವುಂ ದೇವಿಯುಂ ಆಲಿಸವೇಟ್ಕುಂ; ಬಿನ್ನವಿಸವೇಟ್ಟುದಿರ್ಪುದು. ಮದ್ರಾಧಿಪತಿ ಶಲ್ಯಂ ಮಹಾರಾಜನಿಂದೆ ಸಂಹೃತನಾಗೆ, ಗಾಂಧಾರರಾಜಕುಲದ ಶಲಭಂ ಸಾದೇವನ ಅಸ್ತ್ರಮೆಂಬಗ್ನಿಗೊಳಗಾಗೆ, ಪಡೆವಳಂ ಹತನಾದುದಱಿಂ ಗೋಟಿಡುತಿರ್ದ್ದ

ಕೆಲಂಬರ್ ಯೋದ್ಧಾರರುಂ ರಣರಂಗಮನುೞಿಯೆ, ಧೃಷ್ಟದ್ಯುಮ್ನನ ಬೆಂಗಾಪನೊಂದಿದ ನಿಮ್ಮ ಪಡೆಗಳ್ ಪಗೆಗಳೊಗ್ದವಿದ ಸೋಲಿಂ ಪೆಟ್ಟು ವೆರ್ಚೆ ಸುತ್ತುತುಂ ಸೋಜಿಗದ ಪನ್ನತಿಕೆಯಿಂದವಂದಿರಂ ಸದೆಬಡಿದು ಪೆಡಮಗುೞ್ಚುತಿರೆ, ಕೃಪಕೃತವರ್ಮಾಶ್ವತ್ಥಾಮರೆಲ್ಲಿಯೋ ಅಡಂಗೆ, ಇಂದೆ ಪೂರಯಿಸವೇೞ್ಪುದಂ ಕುಮಾರಭೀಮಸೇನನ ಪೂಣ್ಕೆಯುಂ ಕೇಡಿಗಂ ಕೌರವಾಧಮನವನಾರಯ್ದು ತಾನೆಲ್ಲಿ ಮಱೆಗೊಂಡನೋ ತಿಳಿಯಲರಿದಾಗಿರ್ಕುಂ.

**ಯುಧಿಷ್ಠಿರಂ**—ಚಿಃ ಕಷ್ಟಂ ಕಷ್ಟಂ !! ಬೞಿಕೆ ಬೞಿಕೆ ?

**ದ್ರೌಪದಿ**—ಮುಂದೆ ಪೇೞ್.

**ಪಾಂಚಾಲಕಂ**—ಮಹಾಪ್ರಭುವುಂ ದೇವಿಯುಮವಧಾನವೀವುದು. ಬೞಿಕೆ ಭಗವಂತನಿಂ ವಾಸುದೇವನಿಂ ಅಧಿಷ್ಠಿತಮಾದ ಒರ್ತೇರೊಳ್ ಭೀಮಾರ್ಜುನರಿರ್ವರುಂ ಕುಳ್ಳಿರ್ದು ಸ್ಯಮಂತಪಂಚಕದ ಸುತ್ತಲುಂ ಚರಿಸಲಾರಂಭಿಸಿದರ್. ಅವಂ ದೊರೆಕೊಂಡನಿಲ್ಲಂ. ಬೞಿಕ್ಕೆ ಎಮ್ಮನ್ನರಚ್ಚುೞಾಯ್ತುರ್ ಅಕ್ಕಟಾ ! ದುರ್ವಿಧಿಯೋ ! ಎಂದು ಮಮ್ಮಲಂ ಮಱುಗುತಿರೆ, ಕುಮಾರಾರ್ಜುನಂ ನೀಡುಂ ಬಿಸುಸುಯ್ಯುತಿರೆ, ವೃಕೋದರಂ ಬರಿಸರಿತುವಿನಿರುಳೊಳ್ ಪಾಱಾಡುವ ಮಿಂಚುಂಬುೞುಗಳ ನೆರವಿಯಂತೆ ಕೆಂಬೊಗರ್ಗುಂಬಾದ ಕಡೆಗಣ್ಣೋಟಂಗಳಿಂ ಗದೆಯುಂ ಪಜ್ಜಳಿಪಂತೆಸಗುತಿರೆ, ಬಿದಿಯೇನನೊ ಮಾಡಿಟ್ಟತೆಂದದಂ ಭಗವಂತಂ ಶ್ರೀಕೃಷ್ಣಂ ಪೞಿಯುತಿರೆ, ಪರಿಚಿತನೊರ್ವ್ವಂ ಮಾನಸಂ ಆಗಳೆ ಕೊಂದ ಮಿಗದ ರಕುತದಿಂ ಕೈಕಾಲ್ಗಳುಂ ಬಟ್ಟೆಯುಂ ರಕ್ತಮಾಗಿರ್ಪ್ಪನಂ ಮಾಂಸಭಾರಮಂ ಪೊತ್ತು ತುರಿಪದಿಂ ಕುಮಾರಭೀಮಸೇನನ ಬೞಿಗೆಯ್ದಿ, ಸುಯ್ನಿಡಿದಾದುದಱಿಂದರ್ಧಮಾತ್ರಮೆ ಕೇಳ್ವ ವರ್ಣಂಗಳಿಂ ನುಡಿಗಳೊಹ್ಯಂಗಳಾಗಿರೆ ಇಂತೆಂದಂ—“ ಕುಮಾರ ಭೀಮಸೇನ ! ಈಪೆರ್ಗೊಳದ ತಡಿಯೊಳ್ ಎರಡ್ಪಜ್ಜೆಸಾಲ್ಗಳ್ ಕಾಣ್ಗುಂ. ಆಪಜ್ಜೆಗಳ ಪಡಿನೆಲ್ಗಳ್

ನೆಱೆ ಪಗಿಲ್ತಿರ್ಕುಂ ; ಅವಱೊಳೊಂದು ನೀರತ್ತಣಿಂ ಮೇಗಣ್ಗೆ ಪತ್ತಿ ಬಂದಂತೆ ಇರ್ಪುದು. ಪೆಱತೊಂದು ಅಂತಿಲ್ಲಂ. ಇಂ ಮುಂದೆ ಕುಮಾರಂಗೆ ತೋಱುದಂತೆ ಮಾಡವೇಳ್ಪುದು" ಎಂದು. ಬಱಿಕ್ಕಾವೆಲ್ಲರುಂ ಸಂಭ್ರಮಂಬೆರಸು ತೆರಳ್ದವು. ಆತನನೇ ಮುಂಗೊಂಡು ಆಸರೋವರದ ತಡಿಯನೆಯ್ದಿ ಪರಿಚಯದಿಂ ತಿಳಿಯಲಪ್ಪ ದುರ್ಯೋಧನನ ಪಜ್ಜೆಗುಱುಪುಗಳನೊಳಕೊಂಡ ದಾರಿಯೆಡೆಯುಂ ಸೇರ್ದವು. ಪೂಜ್ಯಂ ವಾಸುದೇವಂ "ಎಲೆ ವೀರ ಭೀಮಸೇನ! ದುರ್ಯೋಧನಂ ಜಲಸ್ತಂಭವಿದ್ಯೆಯುಂ ಬಲ್ಲನಲ್ತೇ? ಅಂತಪ್ಪುದಱಿಂ ಆವಂ ನಿನಗಂಜಿ ಈಸರೋವರದೋವರಿಯೊಳಡಂಗಿರ್ಪನಕ್ಕುಂ" ಎಂದಂ. ಕೃಷ್ಣಂ ನುಡಿದ ನುಡಿಯನಿದನಾಲಿಸಿ ಕುಮಾರಭೀಮಸೇನಂ ದೆಸೆದೆಸೆಯು ಬಳ್ಳಿಮಾಡಂಗಳೊಳ್ ತೆಕ್ಕನೆ ತೀವಿದ ದನಿಗಂ ಮಿಗಿಲಪ್ಪಂತೆಯುಂ, ನೀರ್ವಕ್ಕಿಗಳೆಲ್ಲಂ ಪೌವನೆ ಪಾಱಿ ಸುತ್ತಾಡುವಂತೆಯುಂ, ನೆಗಳ್ಗಳುಂ ಪಾವುವರಿಜಿನ ಮೀಂಗಳುಂ ಬಿಗುರ್ತ್ತು ನೆಗೆವಂತೆಯುಂ, ಸರದ ಜಳಮೆಲ್ಲಮುಂ ಕದಡಿ ಕಲುಷಿತಮಪ್ಪಂತೆಯುಂ ರೌದ್ರಮೆನೆ ಗರ್ಜಿಸಿ ಇಂತೆಂದಂ—ಎಲವೆಲವೊ ಉಕ್ಕಟಂ ನೆಗೞ್ತೆವಡೆದ ಪುಸಿಯದಟಿನೊಳ್ ಅಭಿಮಾನಂಗೊಂಡವನೆ! ಪಾಂಚಾಲೀಕೇಶಾಂಬರಾಕರ್ಷಣದಿಂ ಮಹಾಪಾತಕಿಯೆನಿಸಿದನೆ! ಕೌರವಾಧಮನೆ!

ಜನಿಯೆಂಬೈ ಶುದ್ಧಚಂದ್ರಾನ್ವಯದೆ ಗದೆಯನಿನ್ನೀಗಳುಂ ತಾಳ್ವೆ
ದುಶ್ಶಾ | ಸನವಕ್ಷಃಕೋಷ್ಣರಕ್ತಾಸವದೆ ಮದಿಸಿದೆನ್ನಂ ನಿಜದ್ವೇಷಿಯೆಂ
ಬೈ || ಎನಸುಂ ದರ್ಪಾಂಧನಾಗುಜ್ಜುಗಿಪೆ ಮಧುಮಹಾಕೈಟಭಧ್ವಂಸಿ
ಯೊಳ್ ಕೃ | ಷ್ಣನೊಳಂ ಮದ್ಭೀತಿಯಿಂ ಪೋರದೆ ಕೆಸಱೊಳಡಂಗಿರ್ಪೆ
ಯೀಗಳ್ ಕುಮತ್ಯಾ ||೧೨೦||

ಮತ್ತಮಿಂತೆಂದಂ—ಎಲೆ ಮಾನಮದಾಂಧ! ಕೌರವಾಧಮ!

ಸದೆಯಲ್ ನಾಂ ಬಲ್ಪಿನಿಂದಂ ಪತಿಗಳನಱುತುಂ ಕೌರವಾಂತಃಪುರಂ ಬಿ | ಚ್ಚಿರ್ದ ಕೇಶಸ್ತೋಮದಿಂ ದ್ರೌಪದಿಯಱಲುರಿ ದಲ್ ಶಾಂತಮಾದಂತೆಯೇ ಕ || ಟ್ಟಿದಿರೊಳ್ ದುಶ್ಯಾಸನೋರಸ್ಸ್ಥಲರುಧಿರಮನೀಂಟುತ್ತಿರಲ್ ಕಂಡು ನೀಂ ಕ್ರೋ | ಧದಿನೇನಂ ಗೆಯ್ದೆ ಭೀಮಂ ಗಸಮಯದೊಳಹಂಕಾರಮಂ ಬಿಟ್ಟಿಯಲ್ತೇ ||೧೭೧||

ಎಂದು.

ದ್ರೌಪದಿ—ಮತ್ತೆ ಸುಲಭದರ್ಶನನಾದೊಡೆ ನಲ್ಲನೆನ್ನ ದುಗುಡಮಂ ತೂಳ್ದಿದಂ.

ಯುಧಿಷ್ಠಿರಂ—ಕೃಷ್ಣೆ! ಈವೇಳೆಯೊಳ್ ಅಮಂಗಳಂಗಳಂ ಉಸಿರ್ವುದಾಗದು. (ಪಾಂಚಾಲಕನಂ ಕುಱಿತು) ಭದ್ರ! ಬೞಿಕಂ ಬೞಿಕಂ?

ಪಾಂಚಾಲಕಂ—ಬೞಿಕವಿಂತು ನುಡಿಯುತಿರ್ದ್ದ ಭೀಮಂ ತಡೆಯಲಸದಳಮಪ್ಪ ಕಿನಿಸಿನಿಂ ಭೀಕರಮಂ ಕರದ ಗದೆಯಂ ಉಕ್ಕ್ರ್ವಿಗೆ ತಿಱ್ರನೆ ತಿರುಪುತೆ ಇೞಿದು ಚೆಕ್ಕನೆ ತಡಿಯಂ ಪಾಯ್ದು ತಾವರೆದುಱುಗಲನೆಲ್ಲಮಿಡಾಡಿ ಹಮ್ಮದಂಬೋಪಂತೆ ಬಳ್ಳಿಮಿಂಗಳಂ ಪೊಯ್ದುಕ್ಕಿ ಜಲಚರಂಗಳೆಲ್ಲಮುಂ ಬೆದಱಿ ಪಾಱಾಡುವಂತೆಸಗಿ ಭೀಷಣತರಮಾದ ವೇಗದಿಂ ಸಲಿಲಮನೆಲ್ಲಂ ಗಿಱ್ರನೆ ಸುತ್ತಿಸಿ ಕಡುವಿರಿದುಮನಾಕೊಳನನೆತ್ತಲುಂ ಕದಡಿ ಕಲಂಕಿದಂ.

ಯುಧಿಷ್ಠಿರಂ—ಅಯ್ಯ! ಆದೊಡಮವಂ ಏಱನೊ?

ಪಾಂಚಾಲಕಂ—ಒಡೆಯ! ಅದೆಂತು ಏಱಂ?

ಉರುಕೋಪಾಗ್ನಿಯ ಕೂರ ನಂಜುಗಿಡಿಗಳ್ ತೀವಿಪ್ಪಿನಂ ಮೇಗೆ ಮಂ | ದರದಂತೊಪ್ಪುವ ಭೀಮಸೇನನ ಭುಜದ್ವಂದ್ವಂ ಕಲಂಕುತ್ತಿರಲ್ || ಆರರೇ ದಾರುಣಕಾಲಕೂಟಮದು ದುಗ್ಧಾಂಭೋಧಿಯಿಂ

ದೆಬ್ಬಿವೋಲ್ | ಸರದಭ್ಯಂತರದತ್ತಣಿಂ ಸರಭಸಂ ತಾನೆಬ್ಬಿನಾ ಕೌರವಂ ||೧೭೨||

**ಯುಧಿಷ್ಠಿರಂ**—ಸಾಧು, ಕ್ಷತ್ರಿಯೋತ್ತಮ! ಸಾಧು.

**ದ್ರೌಪದಿ**—ಕಾಂತಂ ಬವರಮಂ ಕೈಕೊಂಡನೋ?

**ಯುಧಿಷ್ಠಿರಂ**—ಬಟಿಕ್ಕೆ ಬಟಿಕ್ಕೆ?

**ಪಾಂಚಾಲಕಂ**—ಬಟಿಕ್ಕಾ ಸರಸಿಯುತ್ತಣಿಂದೆಬ್ಬಿ ಇಕ್ಕೈರ್ಗಳಿಂ ಪಿರಿಯುಗದೆಯುಂ ತುದಿವೊದಲ್ಗೊಳ್ಪಿಡಿದು ಮೇಗಣ್ಗೆತ್ತಿ ತೋರಣ ವಿದೆನಿಸಿ ಇಂತೆಂದಂ—"ಎಲೆ ಭೀಮ! ದುರ್ಯೋಧನಂ ನಿನಗಂಜಿ ಅಡಂಗಿರ್ದ್ದನೆಂದು ಬಗೆವಯ್? ಎಗ್ಗ! ಪಾಂಡವರಂ ಕೊಲ್ಲದುದಱಿಂ ಪ್ರಕಾಶದೊಳ್ ವಿಶ್ರಮಂಗೊಳಲ್ಕೆ ನಾಣ್ಚಿ ಕಿನ್ನೆಲದ ಮೂಲಮನೆಯ್ದಿರ್ದೆಂ" ಎಂದು. ಬಟಿಕೆ ನೀರೊಳಗೆ ಕಾಳೆಗಂ ತಗದೆಂದು ಕೃಷ್ಣಾರ್ಜುನರ್ ಬಾರಿಸೆ ಭೀಮದುರ್ಯೋಧನರಿರ್ವ್ವರುಂ ನೆಲದೆಡೆಗೆಯ್ತಂದರ್. ಕೌರವೇಂದ್ರಂ ಕುಳ್ಳಿರ್ದ್ದ ನೆಲದೊಳೆ ಗದೆಯುನಿಟ್ಟು, ಹತರ್ ನೂರ್ವರ್ ಕೌರವರ ಮೇಣ್ ಹತಗಜತುರಗಪದಾತಿಗಳ ಕಳೇಬರಂಗಳ ಮೇಲೆ ಬಂದೆಱಗುತಿರ್ಪ್ಪ ಪದ್ದುಕಾಗೆನರಿಗಳನೊಳಕೊಂಡುದುಂ ಎಮ್ಮ ಬೀರರೆಸಗಿದ ಸಿಂಹನಾದದೊಡನೆ ಘೋರ್ಗರೆವ ಬದ್ದವಣಂಗಳುಳ್ಳುದುಂ ಕೆಳೆಯುರ್ ನಂಟರುಮಿಲ್ಲದುದುಂ ಕೌರವಶೂನ್ಯಮುಮಾದ ರಣರಂಗಮಂ ನೋಡಿ ನೀಡುಂ ಬಿಸುಸುಯ್ಯುತಿರ್ದ್ದಂ.

**ಯುಧಿಷ್ಠಿರಂ**—ಬಟಿಕೆ ಬಟಿಕೆ?

**ಪಾಂಚಾಲಕಂ**—ಬಟಿಕೆ ಭೀಮನಿಂತೆಂದಂ—ಎಲೆ ಕೌರವೇಂದ್ರ! ಸಾಲ್ಗುಂ; ಪಕ್ಕುವಣಿಗಳ್ ಹತರಾಗಿ ಬಿಟ್ಟಿರೆ ಕಂಡೀಪರಿ ಮಱುಗುವುದಱನೇಂ? "ಪಾಂಡವರೆಲ್ಲರುಂ ಕುಂದಿಲ್ಲದೆ ನೆಱೆದಿರ್ಪ್ಪರ್; ಆನೊರ್ವ್ವಂ ಅಸಹಾಯನೆಂ" ಎಂದು ಬಗೆಯಲ್ವೇಡ.

ಬವರಮನದಾವನೊಡನೆಸ |
ಗುವುದೀಗಳ್ ನಿನಗಭೀಷ್ಟಮಯ್ವರೊಳೆಮ್ಮೊಳ್ ||
ಅವನೊಡನೆ ಸುಯೋಧನ ನೀಂ |
ಕವಚಂದೊಟ್ಟಸ್ತ್ರವಾಂತು ನಲವಿಂದೆಸಗೈ ||೧೭೩||

ಈನುಡಿಯುಂ ಕೇಳ್ದು ಕೌರವನಿನಿಸು ಕಣ್ಬನಿಯಿಡುತುಂ ಭೀಮಾರ್ಜುನರಂ ನೋಡಿ ಇಂತೆಂದಂ—

ಎನಗೆಲವೊ ಕರ್ಣದುಶ್ಶಾ |
ಸನವಿಶಸನದಿಂದೆ ಸಮರೆ ಗಡ ನೀವಿರ್ವರ್ ||
ಅನಭಿಮತನಾದೊಡಂ ಗೆಯ |
ಲನುವರಮಂ ಸಾಹಸಪ್ರಿಯಂ ನೀನೆ ವರಂ ||೧೭೪||

ಬಱಿಕೆ ಭೀಮದುರ್ಯೋಧನರಿರ್ವರುಂ ಎಱ್ದು ಕನಲ್ದು ಪರಸ್ಪರಾಧಿಕ್ಷೇಪದಿಂ ವಾಕ್ಕಲಹಮನೆಸಗುತ್ತುಂ ತರದಿಂ ಕೂರ್ಗಾಳೆಗಕ್ಕನುವಾಗಿ ನಿಂದು ವಿಚಿತ್ರಮಪ್ಪ ಗದಾದಂಡದಿಂ ಭುಜಪಂಜರಂ ಮನಂಗೊಳೆ, ಮಂಡಲಾಕಾರಗತಿಯಿಂ ಸುತ್ತಲುದ್ಯತರಾದರ್. ಶ್ರೀಕೃಷ್ಣಸ್ವಾಮಿ ಸ್ವಾಮಿಸನ್ನಿಧಿಗೆನ್ನನಟ್ಟಿದಂ; ಅಲ್ಲದೆ ತಾನಿಂತು ಬೆಸಸಿದಂ—ಅದೆಂತೆನೆ, “ ಭೀಮನ ಪೂಣ್ಕೆ ಅಪೂರ್ಣಮೆನಿಸಿರ್ದುದಱಿಂದಮುಂ ಕೌರವಂ ಕಣ್ಗೆ ಗೋಚರನಾಗದೆ ಎತ್ತಲೋ ಅಡಂಗಿರ್ದುದಱಿಂದಮುಂ ಎಮಗೆ ಬಾಗುಳೊದವಿರ್ದುದು. ಈಗಳ್ ಭೀಮಸೇನನ ಕೈಗೆ ದುರ್ಯೋಧನಂ ದೊರೆಕೊಂಡಿರ್ಪುದಱಿಂ ಭೂಮಂಡಲಂ ನಿಷ್ಕಂಟಕಮಾದತ್ತೆಂದು ನೀಂ ತಿಳಿ. ಅಭ್ಯುದಯಕ್ಕೆ ತಕ್ಕಂತೆ ಮಂಗಳಸಮಾರಂಭಮನವರತಂ ಸಂಗಡಿಕ್ಕೆ. ಸಂದೆಯಂಬಡುವುದಾಗದು.

ಜಲದಿಂ ಪೂರಿಕ್ಕೆ ರತ್ನೋಜ್ಜ್ವಲಕಲಶಚಯಂ ನಿನ್ನ ರಾಜ್ಯಾಭಿಷೇಕ | ಕ್ಕೊಲವಂ ತಾಳ್ಗಂದಿನಿಂ ಬಿಚ್ಚಿದ ತಲೆನವಿರಂ ಗಂಟಿಡಲ್ ಕೃಷ್ಣೆಯಿಗಳ್ || ದಲಿತಕ್ಷತ್ರದ್ರುಮಂ ಭಾಸುರನಿಶಿತಕುಠಾರಾನ್ವಿತಂ

ರಾಮನುಂ ಪ್ರ | ಜ್ವಲಿತಕ್ರೋಧಾನಲಂ ಭೀಮನುಮಹಹ ರಣಕ್ಕೈದೆ ಸಂದೇಹಮುಂಟೇ ||೧೭೫||

**ದ್ರೌಪದಿ**—(ಆನಂದಬಾಷ್ಪದಿಂ ಕೂಡಿ) ಮೂಜಗದೊಡೆಯಂ ವಾಸುದೇವಂ ಏನಂ ಬೆಸಸಿದನದಕ್ಕುಮಂತೆ.

**ಪಾಂಚಾಲಕಂ**—ಇದು ಅಸುರಾರಾತಿಯ ಆಶೀರ್ವಾದಮಾತ್ರಮಲ್ತು; ಆಣತಿಯುಮೆನಿಕುಂ.

**ಯುಧಿಷ್ಠಿರಂ**—ಭಗವಂತನ ಆಣತಿಯ ವಿಷಯದೊಳ್ ಆದಾವಂ ವಿಕಲ್ಪಮಂ ಮಾಡುಗುಂ? ಆದಾರಿತ್ತಲ್?

**ಕಂಚುಕಿ**—(ಪೊಕ್ಕು) ಸ್ವಾಮಿ ಬೆಸಸವೇಳ್ಕುಂ.

**ಯುಧಿಷ್ಠಿರಂ**—ಭಗವದ್ವಾಸುದೇವನ ವಿಷಯದೊಳಿರ್ಪ ಗೌರವದಿಂ ವತ್ಸಭೀಮಂಗೆ ವಿಜಯಮಂಗಳಾಶಂಸನಮಂ ಮಾಡವೇಳ್ಪುದಱಿಂ ಆದರ್ಕೆ ತಕ್ಕ ಕಾರ್ಯಸಮಾರಂಭಂಗಳ್ ಸಮನಿಕೆ.

**ಕಂಚುಕಿ**—ಸ್ವಾಮಿಯಾಣತಿಯಂತೆ (ಎಂದುತ್ಸಾಹದಿಂ ಪೊಱಮಟ್ಟು ಆಗಸದೊಳ್) ಉಕ್ಕೆವಗೇಱಿರ ಮುಂದಾಳ್ಗಳಿರಾ! ಪ್ರಧಾನತೆಯನುಸಾರದಿ ನಿಷ್ಪನ್ನಂತವುರದದ್ದಿಕರಿರಾ! ಪಡಿಯಱರಿರಾ! ರಾಜಪಾರ್ಶ್ವವರ್ತಿಗಳಾದಚ್ಚುಳಾಯ್ತರಿರಾ! ಕೌರವರೆಸಗಿದ ಪರಿಭವಮೆಂಬ ಕಡಲಂ ಭುಜಬಲದಿಂ ದಾಂಟಿ ಅಸಾಧ್ಯಮಂ ಪ್ರತಿಜ್ಞಾಭಾರಮಂ ನಿರ್ವಹಿಸಿ, ನೂರ್ವರ್ ದುರ್ಯೋಧನನೊಡವುಟ್ಟಿದರ ವಿಭಂಜನದೊಳ್ ಪ್ರಭಂಜನನುಂ, ದುಶ್ಶಾಸನನೆರ್ದೆಯ ವಿದಾರಣದೊಳ್ ನರಸಿಂಹನುಮೆನಿಸಿ, ಸ್ತಂಭಂಬೋಲ್ಪ ದುರ್ಯೋಧನನ ತೊಡೆಗಳಂ ಪೋಳ್ದು ಜಯಂಬಡೆವೆನೆಂದು ತಱಿಸಂದ ವೀರಭೀಮಸೇನನ ವಿಷಯದೊಳ್ ನೇಹದಿಂ ಮನಮೊಲ್ದ ಯುಧಿಷ್ಠಿರಮಹಾರಾಜಂ ಮಂಗಳಂಗಳನನುಗೊಳಿಸಲಪೇಕ್ಷಿಪಂ. ಏವೇಳ್ದಪಿರ್? ಎತ್ತಲುಂ ಪಿರಿದುಮಗ್ಗಳಮೆನೆ ನೇರ್ಪಟ್ಟಿರ್ದೋಡ

ಮದೇಕೆ ನೀಂ ನೋಡೆ?—ಎಂದೋ? ಸಾಧು; ಮಕ್ಕಳಿರಾ! ಸಾಧು. ಅನುರಕ್ತರಾಗಿ ಹಿತಮೆಸಗುವುದಲ್ತೆ ಮೆಱೆಗುಂ ಮನದೊಳಿರ್ಪ್ಪ ಸಾಮಿ ಬಕುತಿಯುಂ?

**ಯುಧಿಷ್ಠಿರಂ**—ಆರ್ಯ ಜಯಂಧರ!

**ಕಂಚುಕಿ**—ಸ್ವಾಮಿ ಬೆಸಸವೇೞ್ಕುಂ.

**ಯುಧಿಷ್ಠಿರಂ**—ಪೋ; ಪ್ರಿಯವಾರ್ತೆಯನಱಿಪಿದ ಪಾಂಚಾಲಕಂಗೆ ಪಾರುಖಾಣಮನಿತ್ತು ಸಂತಸಮೆಸಗು.

**ಕಂಚುಕಿ**—ಮಹಾಪ್ರಭು ಬೆಸಸಿದಂತೆ (ಎಂದು ಪಾಂಚಾಲಕನೊಡನೆ ಪೋಪಂ)

**ದ್ರೌಪದಿ**—ಕಾಂತ! ಪ್ರಿಯಭೀಮಸೇನಂ ಆಕೇಡಿಗನಂ ಕುಱಿತು ಎಮ್ಮೊಳಯ್ವರೊಳ್ ಆವನೊಡನೆ ಕಾಳೆಗಂಗೆಯಲಿಚ್ಛೆಯಿರ್ಕ್ಕುಮೋ ಆವನೊಡನೆ ಕಾಳೆಗಂಗೆಯ್ಯೆಂದು ಆದೇಕೆ ನುಡಿದಂ? ಒರ್ಮೆ ಭೀಮನನುೞಿದು ಉೞಿದರೊಳ್ ನಾಲ್ವರೊಳ್ ಇನ್ನಾವನನಾದೊಡಂ ಅಪೇಕ್ಷಿಸಿರ್ದ್ದೊಡೆ ಅವನೊಡನಲ್ತೆ ಕಾಳೆಗಮಾಗವೇೞ್ಪುದಾಗಿರ್ದ್ದುದು? ಅಂತದಱಿಂ ಅತ್ಯಾಹಿತಂ ಸಂಭವಿಸುತಿರ್ದ್ದತ್ತು.

**ಯುಧಿಷ್ಠಿರಂ**—ಪಾಂಚಾಲಿ! ಇಂತಲ್ತೆ ಭೀಮನ ಮನೋಗತಂ? ಅಖಿಳರ್ ಕೆಳೆಯರುಂ ನಂಟರುಂ ಶೂರರೊಡವುಟ್ಟಿದರುಂ ರಾಜನ್ಯರುಂ ಹತರಾಗೆ, ಪನ್ನೊಂದಕ್ಷೌಹಿಣಿಗಳೊಳ್ ಕೃಪಕೃತವರ್ಮಾಶ್ವತ್ಥಾಮರೆ ವಲಮುೞಿದಿರ್ಪ್ಪರ್. ನಂಟರಾರುಮಿಲ್ಲದುದಱಿನದಾವಂಗೆ ನಿಜಶರೀರಮಾತ್ರಮೆ ವಿಭವಮಾಗಿರ್ಪ್ಪುದೋ ಆದುರ್ಯೋಧನನೊರ್ಮೆ ಅಭಿಮಾನವುೞಿದು ಕೈದಂ ತೊಱೆವನಕ್ಕುಂ; ಒಂದುಪಕ್ಷದೊಳ್ ತಪೋವನಮಂ ಸೇರ್ವನಕ್ಕುಂ; ಅಲ್ಲದೊಡೆ ತಂದೆಯ ಮುಖದಿಂ ಸಂಧಿಯನಾದೊಡಂ ಬೇೞ್ಪನಕ್ಕುಂ. ಇಂತಪ್ಪೊಡೆ ಇನ್ನೆಗಂ ಬಹುದೂರಂ

ಬರಂ ಸಾಧಿತವಾದ ಈಪ್ರತಿಜ್ಞಾಭಾರಕ್ಕೆ ಕುಂದು ಸಮನಿಸ ಲಕ್ಕುಂ; ಸಕಲಶತ್ರುನಾಶವಾಗದೆ ಪೋಕುಂ—ಎಂದು. ಮತ್ತಂ ದುರ್ಯೋಧನಂ ಪಾಂಡವರೊಳಯ್ವರೊಳ್ ಒರ್ವನೊಡನೆಯುಂ ಕಾಳೆಗಂ ಗೆಯ್ಯಲರುಹನೆನಿಸನೆವಲಂ—ಎಂದು. ಇವನೊಡನೆ ಗದಾಯುದ್ಧಂ ಭೀಮಂಗಲ್ಲದೆ ಪೆಱರ್ಗಲ್ತೆಂದು ನಾನೂಹಿಪೆಂ. ಎಲೆ ಕ್ಷತ್ರಿಯಾಣಿ! ನೋಡು—

ಸವನಿಲ್ಲಂ ಕ್ರೋಧದಿಂದಂ ಗದೆದಿರುವುತೆ ಸಂಗ್ರಾಮದೊಳ್ ನಿಲ್ವ ಭೀಮಂ || ಗೆ ವಲಂ ದುರ್ಯೋಧನಂ ಕೈಚಳಕದೊಳಿದಱೊಳ್ ಸಾಟಿ ರಾಮಂಗೆ ಭದ್ರಂ || ಸವನಿಕ್ಕೆನ್ನೊಲ್ದ ವತ್ಸಂಗನತಕುರುಕುಲಾಂ ಭೋಜಿನೀದಂತಿಗೀಗಳ್ | ಬವರಂ ಭೀಮಂಗೆ ದುರ್ಯೋಧನನೊಡನಿತರ ಗ್ಗಲ್ತೆ ಅಲ್ತೆಂದೆಣಿಪ್ಪೆಂ ||೧೭೬||

(ಬೞಿಕ್ಕೆ ಮುನಿವೇಷಧಾರಿ ಚಾರ್ವಾಕನೆಂಬ ರಕ್ಕಸಂ ಪುಗುವಂ).

**ಚಾರ್ವಾಕಂ**—ಎನಗೆ ನೀಡುಂ ಬಾಯಾಱುಗುಂ. ಇತ್ತಲಾರಿ ರ್ಪ್ಪರ್? ನೀರನಿತ್ತು ನೆಱಲಂ ತೋಱಿ ಎನ್ನನಾದರಿಸವೇೞ್ಕುಂ. (ಎಂದು ರಾಯನ ಬೞಿಯನೆಯ್ದುವಂ).

(ಎಲ್ಲರುಂ ಭೋಂಕನೇೞ್ವರ್).

**ಯುಧಿಷ್ಠಿರಂ**—ಮುನಿಯೆ! ಅಭಿವಂದಿಸುವೆಂ.

**ಚಾರ್ವಾಕಂ**—ಅತಿಥಿಸತ್ಕಾರಕ್ಕಿದು ಸಮಯಮಲ್ತು; ನೀರಿ ತ್ತೆಮ್ಮನಾದರಿಸು.

**ಯುಧಿಷ್ಠಿರಂ**—ಪೂಜ್ಯರೆ! ಪೀಠಮನಲಂಕರಿಸವೇೞ್ಕುಂ.

**ಚಾರ್ವಾಕಂ**—(ಕುಳ್ಳಿರ್ದು) ಎಲ್ಲೈ! ನೀನುಂ ಪೀಠದೊಳ್ ಕುಳ್ಳಿರು.

**ಯುಧಿಷ್ಠಿರಂ**—ಜಯಂಧರ! ನೀರಂ ತಾ; ಈಮುನಿಗಳ್ ಪಿರಿದುಂ ತೃಷಿತರಾಗಿರ್ದಪರ್.

(ಎಲ್ಲರುಂ ಕುಳ್ತರ್.)

**ಕಂಚುಕಿ**—ಆಣತಿ (ಎಂದು ಪೋಗಿ ಮಗುಟಿರ್ದ್ದುಯ್ತಂದು) ಸ್ವಾಮಿಯೆ! ತಣ್ಣಿತುಂ ಕಮ್ಮಿತುಮಾದ ನೀರಿಂ ತೀವಿದ ಕನಕಕಮಂಡಲುವಿದು. ಮೇಣ್ ಪಾನಪಾತ್ರಂ.

**ಯುಧಿಷ್ಠಿರಂ**—ಪೂಜ್ಯರೆ! ತೃಷೆಯಂ ಪರಿಹರಿಸಿಕೊಳ್ವುದು.

**ಚಾರ್ವಾಕಂ**—(ಕಾಲ್ಗರ್ಚಿ, ಆಳೋಚಿಸಿ) ಎಲ್ಯ! ನೀಂ ಕ್ಷತ್ರಿಯನೆಂದು ತೋಱುಗುಂ.

**ಯುಧಿಷ್ಠಿರಂ**—ನೀಂ ನೆಟ್ಟನೂಹಿಸಿದಿರ್?

**ಚಾರ್ವಾಕಂ**—ಸುಲಭಸ್ವಜನವಿನಾಶಂಗಳೊಳ್ ಬವರಂಗಳೊಳ್ ಅರಸರ್ ನಿಚ್ಚವುಂ ತೊಡಗುವರ್; ಅದುದಱಿಂ ನಿಮ್ಮತ್ತಣಿಂ ನೀರ್ವೊದಲಾದುದಂ ಕೊಳ್ವುದಾಗದು ಅಕ್ಕೆ; ಈನೆಟಿಲಿಂದಮುಂ ಸರಸ್ವತೀನದಿಯ ಜಳದಿಂ ತಣ್ಪೇಱಿದ ತರಂಗುಗಳಂ ಸೋಂಕುತಿರ್ಪ್ಪೀಯೆಲರಿಂದಮುಂ ಆಯಸಮಂ ನೀಗುವೆಂ.

**ದ್ರೌಪದಿ**—ಬುದ್ಧಿಮತಿಕೆ! ಬಿಜ್ಜಣಿಗೆಯಿಂ ಮಾರಿಸಿಗಳ್ಗೆ ಗಾಳಿವೀಸು.

**ಚೇಟಿ**—ದೇವಿ ಬೆಸಸಿದಂತೆ.

**ಚಾರ್ವಾಕಂ**—ಅಕ್ಕೆಮ; ಈನಡೆವಳಿ ತಕ್ಕುದು.

**ಯುಧಿಷ್ಠಿರಂ**—ಪೂಜ್ಯರೆ! ಆದೇಕೆ ನೀವಿಂತು ಬಟಲ್ದಿರ್ಪಿರ್?

**ಚಾರ್ವಾಕಂ**—ಎಲ್ಯೆ! ಮುನಿಜನಸುಲಭಮಪ್ಪ ಕೌತೂಹಲದಿಂದಾಂ ಮಹಾತ್ಮರ್ಕ್ಷತ್ರಿಯೋತ್ತಮರ ದ್ವಂದ್ವಯುದ್ಧಮಂ ನೋಡಲ್ಕೆ ಸ್ಯಮಂತಪಂಚಕದ ಸುತ್ತಲುಂ ಸುತ್ತುತಿರ್ದಪೆಂ. ಇಂದು ಶರ

ದದ ಬಿಸಿಲ್ ಬಲ್ಲಿತಾದುದಱಿಂ ಅರ್ಜುನದುರ್ಯ್ಯೋಧನರ ಗದಾಯುದ್ಧಮ ನಿನ್ನುಂ ಪೂರ್ಣಮಪ್ಪನಿತಱೊಳಿ ನೋಡಿ ಬಂದೆಂ.

(ಎಲ್ಲರುಂ ವಿಷಾದಮನಭಿನಯಿಪರ್)

**ಕಂಚುಕಿ**—ಮಾರಿಸಿಯೆ! ಇಂತು ಪೇೞ್ವುದಾಗದು; ಭೀಮ ದುರ್ಯ್ಯೋಧನರ ಗದಾಯುದ್ಧಮೆನವೇೞ್ಕುಂ.

**ಚಾರ್ವಾಕಂ**—(ಅಸೂಯೆವೆರಸು) ಆಃ! ಇದೇಂ? ಸುದ್ದಿಯಱಿ ಯದನನಧಿಕ್ಷೇಪಿಪಂತೆ ಅಧಿಕ್ಷೇಪಿಪೆ?

**ಯುಧಿಷ್ಠಿರಂ**—(ಕಣ್ಬನಿವೆರಸು) ಪೂಜ್ಯರೆ! ಪೇೞಿಂ ಪೇೞಿಂ.

**ಚಾರ್ವಾಕಂ**—ಒಚ್ಚರ್ಣಂ ವಿಶ್ರಾಂತಿಗೊಂಡು ಎಲ್ಲಮಂ ನಿನಗೊರೆವೆಂ; ಈಕೆಟವಂಗೊರೆಯೆಂ.

**ಯುಧಿಷ್ಠಿರಂ**—ಪೂಜ್ಯರೆ! ಇನಿತನೆ ಪೇೞಿಂ. ಅರ್ಜುನ ದುರ್ಯ್ಯೋಧನರ್ಗೇಂ?

**ಚಾರ್ವಾಕಂ**—ಗದಾಯುದ್ಧಮಾಗುತಿಪ್ಪುದೆಂದು ಪೇೞ್ದ ನಲ್ತೆ?

**ಯುಧಿಷ್ಠಿರಂ**—(ಕಣ್ಬನಿಗೂಡಿ) ಏಂ ಭೀಮದುರ್ಯ್ಯೋಧನರ್ಗಲ್ತೇ?

**ಚಾರ್ವಾಕಂ**—ಆದಾದುದು.

(ಯುಧಿಷ್ಠಿರನುಂ ದ್ರೌಪದಿಯುಂ ಮೂರ್ಛೆಗೊಳ್ವರ್)

**ಕಂಚುಕಿ**—(ಸಂಭ್ರಾಂತನಾಗಿ ನೀರಂ ಸಿಂಪಿಸುತೆ) ಒಡೆಯನುಂ ಒಡತಿಯುಂ ಸಮಾಧಾನಂಗೊಳವೇೞ್ಕುಂ.

**ಚೇಟಿ**—ದೇವಿ! ಸಮಾಧಾನಂಗೊಳ್ವುದು. (ಇರ್ವರುಂ ಎೞ್ಚಱು ವರ್)

**ಯುಧಿಷ್ಠಿರಂ**—ಪೂಜ್ಯರೆ! ಭೀಮದುರ್ಯ್ಯೋಧನರ್ಗೆ ಗದಾ ಯುದ್ಧಮಾದುದೆಂದು ಪೇೞ್ದಪಿರದೇಂ?

**ದ್ರೌಪದಿ**—ಪೂಜ್ಯರೆ! ನಡೆದುದಂ ಪೇೞಿಂ.

**ಚಾರ್ವಾಕಂ**—ಎಲೆ ಕಂಚುಕಿ! ಇವರಿರ್ವರುಮಾರ್?

**ಕಂಚುಕಿ**—ಪೂಜ್ಯರೆ! ಈತಂ ಯುಧಿಷ್ಠಿರಮಹಾರಾಜಂ; ಈಕೆ ದ್ರೌಪದಿ.

**ಚಾರ್ವಾಕಂ**—ಆಃ! ಕ್ರೂರನಾಂ ಕಷ್ಟಕರಮಂ ವಿಚಾರಮನುಪಕ್ರಮಿಸಿದೆಂ.

**ದ್ರೌಪದಿ**—ಹಾ ಕಾಂತ! ಮಂದಭಾಗ್ಯೆಗೆನಗೆ ಪಡಿನುಡಿಗುಡು.

(ಎಂದು ಮೂರ್ಛೆವೋಪಳ್).

**ಕಂಚುಕಿ**—ಈತನದೇನಂ ಪೇೞ್ದಂ?

**ಚೇಟಿ**—ದೇವಿ ಸಂತಮಿರ್ಪುದು.

**ಯುಧಿಷ್ಠಿರಂ**–(ಕಣ್ಬನಿವೆರಸು) ಎಲೆ ಭೂಸುರ! ಪೇೞಿಂ ಪೇೞಿಂ.

ಸಂದರ್ಭಮಿಂತು ಸಂದೆಗ |
ಮೊಂದಿರ್ಪುದಱಿನೆ ಯುಧಿಷ್ಠಿರಂ ಮಱುಗಿದಪಂ ||
ಇಂದಾವತ್ಸನ ಮೃತಿ ತಱಿ |
ಸಂದೊಡೆ ತಾಂ ಹರಣಮುೞಿದು ಸುಖಮಂ ಪಡೆವಂ ||೧೭೭||

**ಚಾರ್ವಾಕಂ**—(ಸಂತಸಂಗೊಂಡು, ಸ್ವಗತಂ) ಆವಿಷಯದೊಳ್ ಎನ್ನಯತನಂ (ಪ್ರಕಾಶಂ) ಅವಶ್ಯಂ ಪೇೞವೇೞ್ಪುದಾದೊಡೆ ಸಂಗ್ರಹದಿಂ ಪೇೞ್ದಪೆಂ. ಪಕ್ಕುವಣಿಗಳ ಬೆಸನಮಂ ಬಿತ್ತರದಿಂ ಪೇೞ್ವುದುಚಿತಮಲ್ತು.

**ಯುಧಿಷ್ಠಿರಂ**—(ಕಣ್ಣೀರ್ವಿಡುತ್ತೆ).

ಬಿತ್ತರಿಸಿಯೊ ಸಂಗ್ರಹಿಸಿಯೊ |
ಚಿತ್ತದೊಳಿರಿಸದೆ ಸಮಂತದೆಂತುಂ ಪೇೞಿಂ ||
ದತ್ತಾವಧಾನನೆಂ ವಿ |
ಪ್ರೋತ್ತಮ ವತ್ಸನದನೇನುಮಂ ನಾಂ ಕೇಳಲ್ ||೧೭೮||

**ಚಾರ್ವಾಕಂ**—ಕೇಳ್—

ಭೀಮಂಗಂ ಕೌರವಂಗಂ ರಣಮೊದವಲಿದುದ್ಯದ್ಗದಾರಾವಭೀಮಂ |

**ದ್ರೌಪದಿ**—(ಭೋಂಕನೆದ್ದು) ಪೂಜ್ಯರಿರ! ಬೞಿಕಂ ಬೞಿಕಂ?

**ಚಾರ್ವಾಕಂ**—(ಸ್ವಗತಂ) ಇವರಿರ್ವರುಂ ಎಚ್ಚತ್ತುದಂ ಅದೆಂತು ಪರಿಹರಿಪೆಂ? (ಪ್ರಕಾಶಂ).

ರಾಮಂ ಬಂದಂ ಸವೇಗಂ ಚಿರಮವನಿದಿರಲ್ಲಾಗಳಾದತ್ತು ಯುದ್ಧಂ ||

**ಯುಧಿಷ್ಠಿರಂ**—(ದುಗುಡಂಗೊಂಡು) ಪೂಜ್ಯರೆ! ಪೇೞಿಂ ಪೇೞಿಂ.

**ಚಾರ್ವಾಕಂ**—(ಧೈರ್ಯಂಗೊಂಡು)

ಪ್ರೇಮಾಢ್ಯಂ ಶಿಷ್ಯನೊಳ್ ಸನ್ನೆಯನಱಿಪೆ ಬಲಂ ಗೂಢಮಂ ಧಾರ್ತರಾಷ್ಟ್ರೋ | ದ್ದಾಮಂ ದುಶ್ಯಾಸನಾರಾತಿಗೆ ತಗೆ ಪಡಿಗೆಯ್ದಂ ಗಡಾ ರಯ್ದು ಜಾಣಿಂ ||೧೭೯||

**ಯುಧಿಷ್ಠಿರಂ**—ಹಾ ವತ್ಸ! ವೃಕೋದರ (ಎಂದು ಬೀೞ್ವಂ)

**ದ್ರೌಪದಿ**—ಹಾ ಕಾಂತ! ಭೀಮಸೇನ! ಎನಗೊದವಿದಪಮಾನಕ್ಕೆ ತಕ್ಕ ಮುಯ್ಯಂ ಗೆಯ್ಯಲ್ ಹರಣಮನುೞಿದವನೆ! ಹಾ! ಜಟಾಸುರಹಿಡಿಂಬಕಿರ್ಮೀರಕೀಚಕಜರಾಸಂಧಬಕರಂ ಸದೆದನೆ! ಹಾ! ಸೌಗಂಧಿಕಾಸುಮಮಂ ತಂದಿತ್ತನೆ! ಹಾ! ದುಗುಡಗತ್ತಲೆಗೆ ದಿನಕರನೆನಿಸಿದನೆ! ಎನಗೆ ಮಱುನುಡಿಯುಂ ಕುಡು. (ಎಂದು ಹಮ್ಮದಂಬೋಪಳ್)

**ಕಂಚುಕಿ**—(ಕಣ್ಬನಿಯಿಂ ಕೂಡಿ) ಹಾ! ಕುಮಾರ ಭೀಮಸೇನ! ಕೌರವಕುಲಮೆಂಬ ಕಮಲಿನಿಗೆ ಮಂಜಿನ ಮೞೆಯೆನಿಸಿದನೆ! (ಯುಧಿಷ್ಠಿರನಂ ಕುಱಿತು) ಸಮಾಧಾನಮೊಂದು; ಸಮಾಧಾನಮೊಂದು. ಬುದ್ಧಿಮತಿಕೆ! ದೇವಿಯಂ ಸಂತಮಿಡು. ಮುನಿವರ್ಯ! ನೀಮುಂ ರಾಯನಂ ಸಂತವಿಡಿಂ.

**ಚಾರ್ವಾಕಂ**—(ಸ್ವಗತಂ) ಹರಣಂಗಳಂ ನೀಗಿಸಲ್ ಸಂತವಿಸುವೆಂ. (ಪ್ರಕಾಶಂ) ಎಲೆ ಭೀಮಾಗ್ರಜ! ಒರ್ಚ್ಚಣಂ ಸಮಾಧಾನಮೊಂದು.

**ಯುಧಿಷ್ಠಿರಂ**—(ಎದ್ದು) ಮುನಿಯೆ! ಪೇಳ್ವುದಿನ್ನೇನಾದೊಡಮುಳಿದಿರ್ಪುದೋ?

**ಚಾರ್ವಾಕಂ**—ಬಳಿಕೆ ಹತನಾದಾಕ್ಷತ್ರಿಯೋತ್ತಮಂ ಬೀರರ್ಗೆ ಸುಲಭಮೆನಿಪುದಂ ಗತಿಯುಂ ಪಡೆವುದುಂ, ಭ್ರಾತೃವಧದುಃಖದಿಂ ನೀಡುಂ ಜಗುಳ್ವ ಕಣ್ಣೀರಂ ಸುರಿಯಿಸಿ ಗಾಂಡೀವಮಂ ಬಿಸುಟ್ಟು ಪೊಸನೆತ್ತರ ಪಸರವಡಸಿದ ಗದೆಯನದನೆ ಭ್ರಾತೃಹಸ್ತದತ್ತಣಿಂ ಯತನದಿಂದೀಡ್ದುಕೊಂಡು ಫಲ್ಗುನಂ, ತನ್ನಂ ಬಾರಿಸುತಿರೆ ಸಂಧಿಯಂ ಗೆಯಲಾಟಿಪ ವಾಸುದೇವಂ, ಕೌರವರಾಜಂ ಗಂಭೀರಮಾದ ತನ್ನ ನುಡಿದನಿತಿದ್ರನೆ ತಿರುಪಿದ ಗದೆಯ ಭಾಂಕಾರದಿಂ ನೀಡುಂ ಮಸಗೆ, ಅರ್ಜುನ! ಬಾ ಬಾರೆಂದು ಪರಿಹಾಸಂ ಮಿಗೆ ಕರೆಯುತಿರೆ, ಆತನೊಡನೆ ಪೋಣರಲ್ ತೊಡಗಿದಂ. ಬಳಿಕಂ ಗದೆಯ ಪೊಯ್ತದಿಂದರ್ಜುನನುಂ ಮಡಿವನೆಂದು ಬಗೆದು ಬಲದೇವಂ ಅರ್ಜುನಪಕ್ಷಪಾತಿಯುಂ ರುಕ್ಮಿಣೀಪತಿಯುಂ ಎಂತುಂ ತನ್ನ ತೇರನೆಚ್ಚಿಸಿ ದ್ವಾರಕೆಯನುಯ್ದಂ.

**ಯುಧಿಷ್ಠಿರಂ**—ಸಾಧು ಅರ್ಜುನ! ಸಾಧು. ದೈವಯೋಗದಿಂದಾರುಣಮೆ ನೀಂ ಗಾಂಡೀವಮಂ ಬಿಸುಟು ಭೀಮಸೇನನಂ ಬೆಂಗೊಂಡು ತೆರಳ್ದೆ; ಆನಾದೊಡೆ ಅದಾವುಪಾಯದಿಂ ಮರಣಮಹೋತ್ಸವಮಂ ಪಡೆವೆಂ?

**ದ್ರೌಪದಿ**—(ಎದ್ದು) ಹಾ ಕಾಂತ! ಭ್ರಾತೃವತ್ಸಲ! ಗದೆಯೊಳಶಿಕ್ಷಿತನಪ್ಪ ಸೋದರಂ ಪಗೆಯಿದಿರೊಳ್ ಪೋಗಿ ನಿಂದೊಡಂ ಉಪೇಕ್ಷಿಪುದುಚಿತಮಲ್ತು. (ಎಂದು ಮೂರ್ಛಿಪಳ್)

**ಚಾರ್ವಾಕಂ**—ಏಟಿಕ್ಕೆ ನಾಂ—

**ಯುಧಿಷ್ಠಿರಂ**—ಆಕ್ಕೆ, ಇಂ ಕೇಳ್ವುದಱಿಂದಾಗವೇಟ್ಪುದೇಂ? ಹಾ ತಾತ! ಭೀಮಸೇನ! ಹಾ! ಅರಗುವನೆಗಿಚ್ಚೆಂಬ ಕಡಲಂ ದಾಂಟಿಲ್ ಪಡಂಗೆನಿಸಿದವನೆ! ಹಾ! ಕಿರ್ಮ್ಮೀರಜಟಾಸುರಹಿಡಿಂಬ ಬಕಕೀಚಕದುರ್ಯ್ಯೋಧನಾನುಜರೆಂಬ ಕಮಲವನಕ್ಕೆ ಮತ್ತಗಜವೆನಿಸಿದವನೆ! ಹಾ! ಜೂದಿನ ಪಣದಿಂದೊದವಿದ ವನವಾಸದೊಳ್ ನಂಟನಾಗಿರ್ದವನೆ! ಹಾ! ಎನ್ನ ಜೀವನದಶೆಯೊಳ್ ಸಂಭಾವಿತವಾದ ದುಃಖಶಂಕೆಯುನಡಂಗಿಸಿದವನೆ! ಹಾ! ಮದಾಜ್ಞಾಧಾರಕನೆ! ಹಾ ಕೌರವಸೈನ್ಯಮೆಂಬಡವಿಗೆ ಕಾಟ್ಕಿಚ್ಚೆನಿಸಿದವನೆ!

ಜೂದುಂಗಾಱಂ ವಲಂ ನಾಣಿಲಿಯೆನಿಸಿದನೊಳ್ ನನ್ನೊಳಂ ಭಕ್ತಿಯಿಂದಂ | ಖೇದಂಗೊಂಡುನ್ಮದೇಭಾಯುತಸಮಬಲತಾಶಾಲಿ ನೀಂ ದಾಸ್ಯಮಾಂತಯ್ || ಗೈದೆಂ ನಾನಿಂದಿದರ್ಕ್ಕಗ್ಗಳದಪಕೃತಿಯಂ ವತ್ಸ ನಿನ್ನಲ್ಲದೇನಂ | ಪೋದಯ್ ದಿಕ್ಕಿಲ್ಲದೆನ್ನಂ ತೊಱೆದಕಟೆಡೆಯೊಳ್ ನಿನ್ನದೊಳ್ಪಿತ್ತ ಭೀಮಾ ||೧೮೦||

**ದ್ರೌಪದಿ**—(ಎಚ್ಚು) ಮಹಾರಾಜ! ಇದೇನೊದವಿಪ್ಪುದು?

**ಯುಧಿಷ್ಠಿರಂ**—ಪಾಂಚಾಲಿ! ಪೆಱತೇಂ?

ವಿನುತಂ ಕಿರ್ಮ್ಮೀರಮಾರಂ ಪ್ರಕಟಬಕಹಿಡಿಂಬಾಂತಕಂ ಕೀಚಕಧ್ವಂ | ಸನದಕ್ಷಂ ರೂಕ್ಷದರ್ಪೋದ್ಧತಮಗಧಮಹೀಭೃನ್ಮಹಾಸಂಧಿಸಂಭೇ || ದನವಜ್ರಂ ಮೇಣ್ ಗದೋದ್ಯತ್ಪರಿಘನಿಭಭುಜದ್ವಂದ್ವವಿಭ್ರಾಜಿತಂ ನಿ | ನ್ನಿನಿಯಂ ನನ್ನೊಲ್ದ ತಮ್ಮಂ ವಿಜಯನ ಪಿರಿಯಂ ಜೀವಮಂ ಬಿಟ್ಟನಲ್ತೇ ||೧೮೧||

**ದ್ರೌಪದಿ**—ಹಾ! ಕಾಂತ! ನೀನೆನ್ನ ಕೇಶಪಾಶಮಂ ಕಟ್ಟವೇಡಾ? ವೀರಂಗೆ ಬಾಹುಜಂಗೆ ಪ್ರತಿಜ್ಞಾಭಂಗಂ ತಕ್ಕುದಲ್ತು; ಅದಱ

ನೆನ್ನಂ ನೀಂ ಪ್ರತಿಪಾಲಿಸು; ಆಂ ಬರ್ಪೆಂ. (ಎಂದು ಮೂರ್ಛೆಯು ನೊಂದುವಳ್)

**ಯುಧಿಷ್ಠಿರಂ**—(ಆಗಸದೊಳ್ ದಿಟ್ಟಿಯಿಟ್ಟು) ತಾಯೆ! ಕುಂತಿ! ನಿನ್ನ ಮಗನ ನಡೆವಳಿಯುನಾಲಿಸಿದೆಯಾ? ಇಂತು ಗೋಟುಡುತಿರ್ಪನಂ ಅನಾಥನಂ ಏಕಾಕಿಯುಂ ಎನ್ನಂ ತೊಱೆದು ಎತ್ತಲೋ ಪಯಣಂ ಗೆಯ್ದಂ. ಅಯ್ಯ! ಜರಾಸಂಧಾಂತಕ! ಅಲ್ಪಾಯುವೆನಿಸಿದ ನಿನ್ನಲ್ಲಿ ಜನವಿನ್ನೆಗಮದೇನಂ ವೈಪರೀತ್ಯಮಂ ಕಂಡುದು? ಒಂದುಪಕ್ಷದೊಳ್ ಪಲವನಾನೆ ಬಲ್ಲೆಂ.

ತಲೆಯುಂ ಬಾಗಿದ್ದೆ ನಾಣಿಂ ನೃಪತತಿ ಕರವಿಾವುರ್ವಿಯುಂ ನನ್ನ ಕೆಯ್ಗ | ತ್ತಿಲೆ ನಿನ್ನಂ ಜೂದಿನೊಳ್ ನಾಂ ಪಣವೆಸಗಿದೊಡಂ ಕ್ರೋಧಮಂ ತಾಳದೊಲ್ದೈ || ನೆಲಸಲ್ಕಾಂ ಮತ್ಸ್ಯದೇಶಕ್ಷಿತಿಪತಿಗೃಹ ದೊಳ್ ಸೂದನಾಗಿರ್ದೆಯೆಂಬು | ಜ್ಜ್ವಲಚಾರಿತ್ರಾಳಿ ನೀಂ ತೊಟ್ಟನೆ ಮರಣಮನೊಂದಲ್ಕೆ ಚಿಹ್ನಂಗಳಲ್ತೇ ||೧೮೨||

ಎಮ್ಮ ಅದೃಷ್ಟಂಗಳ್ಗೆ ಧಿಕ್ಕಾರಮಕ್ಕೆ; ಪೂಜ್ಯಬಲರಾಮನೆ! ಶ್ರೀಕೃಷ್ಣನಗ್ರಜನೆ! ಸುಭದ್ರೆಯ ಸೋದರನೆ!

ಇನಿಸುಂ ಬಂಧುಜನಾನುರಾಗಮನದಂ ಮೇಣ್ ಕ್ಷಾತ್ರಮಂ ಧರ್ಮಮಂ | ಮನದೊಳ್ ಚಿಂತಿಸೆ ಪಾರ್ಥನಲ್ಲಿ ಸಹಜಂಗಿರ್ಪೊಲ್ಮೆ ಯಂ ನೋಡೆ ನೀಂ || ಅನುವಿಂ ಶಿಷ್ಯರೊಳಿರ್ವರೊಳ್ ಸಮತೆಯಿಂ ನೀನೊಲ್ವುದರ್ಹಂ ಗುಣ| ಜ್ಞನೆ ನಿರ್ಭಾಗ್ಯನೊಳಿನ್ನೊಳಿಂತು ವಿಮುಖಂ ನೀನಾದೆಯಿಾಮಾಟಕ್ಕೆಯೇಂ ||೧೮೩||

(ದ್ರೌಪದಿಯು ಬಳಿಗೆಯ್ತಂದು) ಎಲೆ ಪಾಂಚಾಲಿ! ಏಟಿಬ್; ಆವಿರ್ವರುಂ ಸಮದುಃಖರಪ್ಪಂ. ಮುಚ್ಚಿಗೊಂಡು ನೀನೇಕೆ ನನ್ನಂ ಬಂಚಿಪೆ?

**ದ್ರೌಪದಿ**—(ಎಚ್ಚೆತ್ತು) ಎಲೆ ಎನ್ನ ಕಾಂತ! ಕಟ್ಟುಕಟ್ಟು; ದುಶ್ಶಾಸನಂ ಬಿಚ್ಚಿರ್ದೆನ್ನ ಕೇಶಪಾಶಮಂ ದುರ್ಯೋಧನನ ನೆತ್ತರಿಂ ನಾಂದ ಕೈಯಿಂದೆ. ಚೇಟಿ ಬುದ್ಧಿಮತಿಕೆ! ಮನದನ್ನಂ ನಿನ್ನಿದಿರೊಳೆ ಪೂಣ್ದಂ. ದೇವಕೀನಂದನನೀಗಳೆನಗಾದೇಶಿಸಿದಂ ಕೇಶರಚನೆಯುನನುಗೆಯ್ವುದೆಂದು. ಆದುದಱಿಂ ಮಲರ್ದ ಮಲರ್ಗಳ ತುಱುಗಲಂ ಎನಗೆ ತಂದೀಯು. ಎಲೆ ಪೆಣ್ಗಳಿರಾ! ತುಱುಂಬಿಡಿಂ. ಸಲಿಸಿಂ ಭಗವಂತನಾದ ಪುರುಷೋತ್ತಮನ ನುಡಿಯಂ. ಆತಂ ಪುಸಿಯಂ. ಒಂದುಪಕ್ಷದೊಳ್ ಬೇಗುದಿಗುದಿವಳಾನೇವೇೞ್ದಿನೋ? ಅತಿದೂರದೊಳ್ ಗಮಿಪನಂ ಆರ್ಯಪುತ್ರನಂ ಅನುಗಮಿಪೆಂ. (ಯುಧಿಷ್ಠಿರನೆಡೆಗೆಯ್ದಿ) ಮಹಾರಾಜ! ಎನಗಾಗೆ ಚಿತಿಯಂ ಪಜ್ಜಳಿಸು. ನೀನುಂ ಕ್ಷಾತ್ರಧರ್ಮಮನುೞಿಯದೆ ಕೈಕೊಂಡು ಕಾಂತನ ಹರಣಂಗಳನಪಹರಿಸಿದ ಪಗೆಯಂ ಇದಿರ್ಚು.

**ಯುಧಿಷ್ಠಿರಂ**—ಪಾಂಚಾಲಿ ತಗೆ ನುಡಿಗುಂ. ಎಲೆ ಕಂಚುಕಿ! ಚಿತೆಯಂ ಪೊತ್ತಿಸಿ ಈದೀನೆಯುದವಟಲ್ ಸಹ್ಯಮಪ್ಪಂತೆ ಗೆಯ್. ಎನಗಂ ತಿರುವೇಱಿಸಿದ ಬಿಲ್ಲಂ ತಾ; ಮೇಣ್ ಬಿಲ್ಲಿಂದೇಂ?

ತನುವಿನ ನೆತ್ತರಿಂ ನನೆದು ಪಾಟಲವರ್ಣಮನಾಂತ ಭೀಮಸೇ |
ನನ ಘನವಾದ ತದ್ಗದೆಯನೇ ಪಿಡಿದಿಂದು ಬಿಸುಟ್ಟು ಚಾಪಮಂ ||
ವಿನುತಸಹೋದರಪ್ರಿಯನವಂ ನರನೇನಸೊಡರ್ಚಿದಂ ಸಮಂ |
ತೆನಗಮುದೇ ಪ್ರಶಸ್ತಮೆನಿಕುಂ ಜಯದಿಂದೆನಗಿನ್ನದೇಂ ಫಲಂ ||೧೮೪||

**ಚಾರ್ವಾಕಂ**—ಎಲೆ ರಾಯನೆ! ನಿನ್ನ ಮನಂ ಶತ್ರುಜಯದೊಳ್ ಪರಾಙ್ಮುಖಮಾಗಿರ್ದೊಡೆ ಇಲ್ಲಿಯೆ ಪ್ರಾಣತ್ಯಾಗಮಂ ಮಾಡು. ಅತ್ತಣ್ಗೆ ಪೋಪುದು ವ್ಯರ್ಥಂ.

**ಕಂಚುಕಿ**—(ಕೋಪದಿಂ) ಚೀಃ ಮೂರ್ಖ! ನಿನ್ನ ಹೃದಯಂ ಮುನಿಜನಕ್ಕೆ ತಕ್ಕುದಲ್ತು, ಕಟ್ಟಾಸುರಂ.

**ಚಾರ್ವಾಕಂ**—(ಭಯಂಗೊಂಡು, ಸ್ವಗತಂ) ಇವನೆನ್ನನಱಿತಿರ್ಪ್ಪನೋ ? (ಪ್ರಕಾಶಂ) ಎಲೆ ಕಂಚುಕಿ! ಆಂ ಪೇೞ್ವುದಿದು :—ಅರ್ಜ್ಜುನ ದುರ್ಯ್ಯೋಧನರ್ಗ್ಗೆ ಗದೆಯಿಂದಲ್ತೆ ಯುದ್ಧಮೊದವಿರ್ಪ್ಪುದು ? ಗದಾಯುದ್ಧದೊಳ್ ಅವರ್ಗಿರ್ವ್ವರ್ಗ್ಗಂ ಉಳ್ಳ ತೋಳ್ವಲ್ಮೆಯುಂ ನಾಂ ಬಲ್ಲೆಂ. ಮೊದಲೆ ದುಗುಡದೊಳಿರ್ಪ್ಪ ರಾಯುರಿಸಿಗೆ ಪೆಱತೊಂದನಿವ್ವುವಾರ್ತೆ ಕೊಡಂಕೆಗೆ ಬೀೞ್ವುದು ತಕ್ಕುದಲ್ತೆಂದು ಇಂತು ನುಡಿವೆಂ.

**ಯುಧಿಷ್ಠಿರಂ**—(ಕಣ್ಣೀರಂ ಬಿಡುತ್ತೆ) ಮುನಿಯೆ! ಸಾಧು ಸಾಧು ; ನೀಂ ಕೂರ್ತು ನುಡಿದೆ.

**ಕಂಚುಕಿ**—ಮಹಾರಾಜನೆ! ಸಗ್ಗಗರ್ಗ್ಗಣೆಯೆನಿಪ ಪ್ರಭುವುಂ ಪಾಗದವಾನಿಸನಂತೆ ಶೋಕಾಂಧನಾಗಿ ಕ್ಷತ್ರಿಯಧರ್ಮಮನುೞಿವುದಿದೇಂ ?

**ಯುಧಿಷ್ಠಿರಂ**—ಆರ್ಯ ಜಯಂಧರ ! ಹಾ ! ಕೆಟ್ಟೆಂ.

ಘನಪರಿಘಂಗಳಂ ನೆಱಯೆ ಪೋಲ್ವ ಭುಜಂಗಳಿನೊಪ್ಪಿ ರಾಜರಾ|
ಜನ ಸುರರಾಜನಾ ನೆಲೆಗಳಲ್ಲದಟಂ ಮೆಱೆದಿಂದು ಭೂಮಿಯೊಳ್ ||
ತನುಹತಿಯಾಂತು ಬಿೞ್ದಿರೆ ವಿಲೋಕಿಸಲಾರ್ಪ್ಪೆನೆ ವತ್ಸಭೀಮಘ |
ಲ್ಗನರನವರ್ದ್ವಿವಕ್ಕೆ ಸಲೆ ಹರ್ಷಪರಾತಿಯ ನೋಡಲಾರ್ಪ್ಪೆನೇ ||

ಎಲೆ ಪಾಂಚಾಲರಾಜಪುತ್ರಿ! ಎನ್ನ ದುರ್ನ್ನಯದಿಂ ಇಂತಪ್ಪ ಶೋಚನೀಯಸ್ಥಿತಿಗೆ ಪಕ್ಕಾದವಳೆ! ಅಗ್ನಿಯಂ ಪ್ರಜ್ವಲನಂಗೊಳಿಪಂತೆ ಆವಿರ್ವ್ವರುಂ ಬಂಧುಜನಮುಂ ಆದರಿಸಿ ಪ್ರೋತ್ಸಾಹಿಸುವಂ.

**ದ್ರೌಪದಿ**—ಆರ್ಯ ! ಕಾಷ್ಠಂಗಳಂ ತಂದೊಟ್ಟು. ಇದೇಂ ಮಹಾರಾಜನಾಣತಿಯನೆ ಆದಾವನುವಿಾಡೇಱುಸಂ ? ಹಾ ಕಾಂತ! ನೀನಿಲ್ಲದುದಱುಂ ಈಗಳೆ ಪರಿಜನಮುಂ ಕಡೆಗಣ್ಬುಗುಂ.

**ಚಾರ್ವಾಕಂ**—ಭರತಕುಲಾಂಗನೆಯರ್ಗೆ ಪತಿಸಹಗಮನ ಮಿದು ತಕ್ಕುದು

**ಯುಧಿಷ್ಠಿರಂ**—ಮಾರಿಸಿಯೆ! ಪರಿಜನಮಾವುದರ್ಕಂ ಕಿವಿಗುಡದು; ಅಂತಪ್ಪುದಱಿಂ ನೀಮೆ ಇಂಧನಂಗಳನಡಕಿಸಿ ಅನುಗ್ರಹಿಸವೇಳ್ಕುಂ.

**ಚಾರ್ವಾಕಂ**—ಈಕಜ್ಜಂ ಮುನಿಜನಕ್ಕೆ ಸಲ್ಲದು (ಸ್ವಗತಂ) ಎನ್ನ ಮನೋರಥಂ ಪಣ್ತುದು. ಕಣ್ಗೆ ಗೋಚರನಾಗದೆಯೆ ಇಂಧನಂಗಳ ಪೇರಡಕಿಲಂ ಪೂರ್ತಿಸುವೆಂ. (ಪ್ರಕಾಶಂ) ರಾಯನೆ! ಆನಿತ್ತಲಿರಲಾಱೆಂ. (ಎಂದು ಪೋಪಂ)

**ಯುಧಿಷ್ಠಿರಂ**—ಪಾಂಚಾಲಿ! ಈಗಳ್ ಎನ್ನೊರೆದುದಂ ಆವನುಂ ಅನುಗೊಳಿಸಂ. ಅಕ್ಕೆ; ನಾನೆ ಕೈಯಿಂ ಕಾಷ್ಠಂಗಳಂ ನೆರೆಪಿ ಚಿತಿಯಂ ಪಜ್ಜಳಿಪೆಂ.

**ದ್ರೌಪದಿ**—ಮಹಾರಾಜಂ ತ್ವರೆಗೆಯ್ಯವೇಳ್ಕುಂ.

(ನೇಪಥ್ಯದೊಳ್ ಕೋಲಾಹಲಮಕ್ಕುಂ)

**ದ್ರೌಪದಿ**—(ಕೇಳ್ದು ಭಯಂಗೊಂಡು) ಇದು ಬಲ್ಪಿನಿಂ ಕೊಪ್ಪಿರ್ದ ಆದೊರ್ವ್ವನ ಪುಯ್ಯಲೆಂಬಿನಮಲ್ತೆ ಕೇಳ್ಗುಂ? ಪೆಱತೊಂದಂ ಕಿವಿಯೊಳ್ ಕೇಳಲೆವೇಳ್ಪುದಿರ್ಕ್ಕುಂ; ಅಂತಪ್ಪುದಱಿಂ ಇಂ ತಳ್ವುವುದಾಗದು.

**ಯುಧಿಷ್ಠಿರಂ**—ಎಲೆ ಪಾಂಚಾಲಪುತ್ರಿ! ಪೂಜ್ಯೆ ಮಾತೆಗಂ ನಿನ್ನ ಸವತಿಗಂ ಏನನಾದೊಡಂ ಪೇೞ್ದು ಪರಿಜನಮಂ ಕಳಿಪು.

**ದ್ರೌಪದಿ**—ಮಹಾರಾಜನೆ! ಮಾತೆಗೀಮಾತಂ ಪೇೞ್ದಟ್ಟುವೆಂ—"ಬಕಹಿಡಿಂಬಕಿರ್ಮ್ಮೀರಜರಾಸಂಧಕೀಚಕರ್ಗೆ ಬಲ್ಸಟ್ಟಿಗಂ ನಿನ್ನ ನಟ್ಟಣುಗಂ ತಾನಾವಂ ಆತಂ ಹತಾಶೆಯಾದೆನ್ನ ಮೇಲಣ ಕಟ್ಟಿಱಿಕದಿಂ ಪರತ್ರೆಗೆ ಪಯಣಂಬೋದಂ" ಎಂದು.

**ಯುಧಿಷ್ಠಿರಂ—ಬುದ್ಧಿಮತಿಕೆ ! ಮಾತೆಗೆನ್ನ ಮಾತನಿಂತು ಪೇೞ್.**

ಬೆಂದರಗಿನ ಮನೆಯಿಂ ಪೊಱ |
ತಂದನೊ ಸುತರೊಡನೆ ನಿನ್ನನಾರ್ಪಿಂದಾವಂ ||
ಇಂದೞಿದಂ ನಿನ್ನೊಲವಿನ |
ನಂದನನವನೆಂದು ಜನನಿ ನಿನಗೆಂತೊರೆವೆಂ ||೧೮೬||

ಆರ್ಯ ! ಜಯಂಧರ ! ನೀನುಂ ಸಾದೇವನ ಬೞಿಗೆಯ್ದವೇೞ್ಕುಂ. ಪಾಂಡವಕುಲಕ್ಕೆ ಬೃಹಸ್ಪತಿಯೆನಿಪನುಂ ಎಮ್ಮ ಕಿಱಿಯನುಂ ಮಾನ್ಯನುಮಪ್ಪ ಆಮಾದ್ರೀನಂದನಂಗಿಂತು ಪೇೞವೇೞ್ಕುಂ. ಸಕಲಕುರುಕುಲಮೆಂಬ ಕಾಡಿಂಗೆ ಕಾೞ್ಕಿಚ್ಚೆನಿಸಿದಂ ಯುಧಿಷ್ಠಿರಂ ಪರಲೋಕಕೆ ಪಯಣಂಗೆಯ್ದಂ. ಒಲವಿನ ಕಿಱುದಮ್ಮನಂ ಅನುರೂಪನಂ ಆವಗಮಾಶೀರ್ವಾದಕ್ಕೆ ತಕ್ಕನಂ ಖೇದದೊಳಂ ಮೋದದೊಳಂ ಬೆಳ್ತನವಿಲ್ಲದನಂ ನಿನ್ನಂ ಬಿಮ್ಮನಪ್ಪಿ ಮೇಣ್ ಸಿರದೊಳಾಘ್ರಾಣಿಸಿ ಇಂತಿದಂ ಬೇೞ್ಪಂ.

ಕಿಱಿಯಂ ನೀನೆನಗಾದೊಡಂ ವಯದೆ ಶಾಸ್ತ್ರಜ್ಞಾನದೊಳ್ ಮತ್ಸಮಂ | ಪಿರಿಯಂ ಸ್ಥೈರಣೆಯುಳ್ಳುದಾರಮತಿಯಿಂ ವೈದುಷ್ಯದಿಂ ದೇಸಿಗಂ || ಸಿರದಲ್ಲಂಜಳಿಯೊಂತು ನಿನ್ನನಿದಱಿಂದಾನರ್ಥಿಪೇನೆನ್ನೊಳಾ| ಪರಿಯಿಟ್ಟೆಪ್ಪೊಲವಂ ಸಡಿಲ್ಚಿ ಜಳಮಂ ತಾತಂಗೆಲ್ಬೈ ನೀಡು ನೀಂ ||

ಅಂತಲ್ಲದೆಯುಂ ಎಳವೆಯೊಳ್ ವರ್ಧಿತನುಂ ಆವಗಮಭಿಮಾನಿಯುಂ ಕಲ್ಲಂತೆ ಕಡಿದಾದ ಹೃದಯಸಾರಮುಳ್ಳನುಮಾದ ನಕುಲನುಂ ಎನ್ನಾಜ್ಞಾವಚನದೊಳಿರವೇೞ್ಕುಂ ; ಅಂತಪ್ಪುದಱಿಂ ನಕುಲಂಗಿಂತು ಪೇೞ್. ವತ್ಸ ! ನೀನುಂ ಎಮ್ಮ ದಾರಿಯುಂ ಪಿಡಿಯಲಿಂಬೇಡ.

ವರಶಾಸ್ತ್ರಜ್ಞತೆಯಿಂದೆ ಶುದ್ಧಮೆನಿಪುದ್ಯತ್ಪ್ರಜ್ಞೆಯಿಂ ಸಾನುಜಂ |
ಮಱೆತೆಮ್ಮಂ ಪಿತರಂಗೆ ಬಾಷ್ಪದೊಡನೀಯಲ್ ವಾರಿಯುಂ ಜ್ಞಾತಿಮಂ||

ದಿರದೊಳ್ ಮೇಣ್ ಯದುವರ್ಯರಾಲಯದೆ ಮೇಣಾವಾಸಿಸುತ್ತುಂ ವನಾಂ | ತರದೊಳ್ ವತ್ಸನೆ ನೀನೊಡರ್ಚ್ಚುವುದೆಲ್ಲೈ ಶಾರೀರಸಂರಕ್ಷೆಯಂ ||೧೮೮||

ನಡೆ ಜಯಂಧರ! ಎನ್ನೊಡಲಂ ಮುಟ್ಟಿ ನಿನಗಾಣೆಯಿಟ್ಟೆರ್ಪ್ಪೆಂ. ಕಿಱುವೊೞ್ತಿನೊಳೆ ನೀಂ ನಡೆತಂದು ಚಿತಿಯಂ ಸಜ್ಜುಗೆಯ್ವುದು.

**ದ್ರೌಪದಿ**— ಸಖಿ! ಬುದ್ಧಿಮತಿಕೆ! ಪ್ರಿಯಸಖಿ ಸುಭದ್ರೆಗೆ ಆಂ ಪೇೞ್ದೆನೆಂದು ಪೇೞ್; ಗರ್ಭಿಣಿ ವತ್ಸೆಯುತ್ತರೆಗೆ ಇದು ನಾಲ್ಕನೆಯ ತಿಂಗಳ್; ಆದುದಱಿಂ ಕುಲಪ್ರತಿಷ್ಠಾಪಕಮನೀಗಬ್ಬಮಂ ಅವಹಿತ ಚಿತ್ತೆಯಾಗಿ ನೀಂ ಕಾಪಿಡವೇೞ್ಕುಮೆಂದು.

**ಯುಧಿಷ್ಠಿರಂ**—(ಕಣ್ಣೀರೊಡನೆ) ಆಃ! ಕಷ್ಟಂ.

ಧರೆಯಂ ಶಾಖೆ ಮುಸುಂಕೆ ಸುತ್ತಲುಮುರುಸ್ಕಂಧಂ ಸಮಂತೊಪ್ಪೆ ಬಿ | ತ್ತರದಿಂ ತನ್ನವೊಲೆತ್ತಮಾವರಿಸೆ ಪೆರ್ವೇರ್ ತಳ್ತು ಪರ್ಯಂತಮಂ || ಮೆಱೆಯುತ್ತಿರ್ದುದು ದಗ್ಧಮಾಗೆ ಬಿದಿಯಿಂದಂ ಪೆರ್ಮರಂ ತಣ್ಣೆೞ | ಲ್ಗಱೆ ಕಟ್ಟಾಸೆಯನೀಕೆ ತಾನದಱ ಸೂಕ್ಷ್ಮಾಂಕುರದಲ್ಲಿಟ್ಟಪಳ್ ||೧೮೯||

**ಪಾಂಚಾಲಿ**— ಈಗಳಿನ ಕಜ್ಜಮನೊಡರ್ಚು. (ಕಂಚುಕಿಯಂ ನೋಡಿ) ಆರ್ಯ ಜಯಂಧರ! ಎನ್ನೊಡಲಂ ಮುಟ್ಟಿಯಾಣೆಯಿಟ್ಟೊಡಂ ಒರ್ಪ್ಪಜ್ಜೆಯುಮಂ ಮುಂತಣ್ಗಡೆ.

**ಕಂಚುಕಿ**—(ಅೞುತ್ತು) ಹಾ! ಪಾಂಡುಚಕ್ರವರ್ತಿಯೆ! ನಿನ್ನ ಮಕ್ಕಳ್ಗೆ ಯುಧಿಷ್ಠಿರಭೀಮಾರ್ಜುನನಕುಲಸಹದೇವರ್ಗಂ ಕಡೆಗೀಕಿಡು ದಸೆಯೇ? ಹಾ! ದೇವಿ ಕುಂತಿ! ಭೋಜಕುಲಪಾವನಿ!

ತನಯಂ ನಿನ್ನ ಸಹೋದರಂಗೆ ಪಿರಿಯಂ ಕೃಷ್ಣಂಗೆ ಪಾರ್ಥಂಗೆ ಮ | ಯ್ದುನನೋಜಂ ಧೃತರಾಷ್ಟ್ರಜಾಂಬುಜವನಧ್ವಂಸದ್ವಿಪೇಂದ್ರಂಗೆ

ಪಾ || ವನಿಗುನ್ಮತ್ತತೆವೆತ್ತನಲ್ಲದೊಡೆ ಮತ್ತಂ ಸುಟ್ಟನಾಸೀರಿ ಮೇ | ದಿನಿಯಂ ತಣ್ಣನೆ ಗೆಯ್ವ ಚಾಯೆಯುಳುದಾರ್ತ್ವನ್ನಂದನೋದ್ಯಾನಮಂ||

(ಎಂದಟ್ಟುತ್ತುಂ ಪೋಪಂ)

**ಯುಧಿಷ್ಠಿರಂ**—ಆರ್ಯ! ಜಯಂಧರ! ಜಯಂಧರ!

**ಕಂಚುಕಿ**—(ಪೊಕ್ಕು) ದೇವಂ ಬೆಸಸವೇೞ್ಕುಂ.

**ಯುಧಿಷ್ಠಿರಂ**—ಪೇೞಲ್ಕೆ ತಕ್ಕುದೆಂದು ಪೇೞ್ವೆಂ. ನಿಮ್ಮ ಭಾಗ್ಯಂಗಳ್ ಇನಿತೆವಲಮೆನಲಾಗದು. ವತ್ಸಂ ವಿಜಯನೊರ್ಮೆ ವಿಜಯಿಯಾದೊಡೆ ಆಗಳ್ ನೀನೀನುಡಿಯಂ ನಾಂ ಪೇೞ್ದೆನೆಂದವಂಗೆ ನುಡಿ.

ಬಲಭದ್ರಂ ಕಾರಣಂ ವತ್ಸನ ಮೃತಿಗೆ ದಲಂತಾದೊಡಂ ಭ್ರಾತರಂ ನಿ | ನ್ನೊಲವಿಂಗೀಡಾದ ಲಕ್ಷ್ಮೀಪತಿಗವನದಱಿಂದಾತ ನೊಳ್ ಕ್ರೋಧಪರ್ಯ್ಯಾ || ಕುಲನಾಗಲ್ವೇಡ ಮೇಣ್ ಕಟ್ಟೆಱಕಮನೆಸಗ ಲ್ವೇಡ ನನ್ನೊಳ್ ವನಕ್ಕೈ | ದೆಲೆ ಪಾರ್ಥಾ ನಿರ್ದಯಕ್ಷತ್ರಿಯಪದ ವಿಯನಿನ್ನೊಂದಲಿಂಬೇಡಮೆಂದುಂ ||೧೯೧||

**ಕಂಚುಕಿ**—ಆಣತಿಯಂತೆ (ಎಂದು ಪೋಪಂ)

**ಯುಧಿಷ್ಠಿರಂ**—(ಸಂತಸದಿಂ) ಎಲೆ ಕೃಷ್ಣೆ! ಪರೆಪಿದ ಜ್ವಾಲೆ ಗಳೆಂಬ ಹಸ್ತಂಗಳಿಂದೆ ಎಮ್ಮನ್ನರಂ ದುಃಖಿತರಂ ಕರೆವಂತಿರ್ಪ್ಪ ಪೂಜ್ಯ ನೀಯಜ್ಞೇಶ್ವರಂ ತಾನೆ ಪೊತ್ತಿದಂ. ಈತಂಗೆನ್ನೊಡಲಂ ಇಂಧನ ಮಾಗಿಪೆಂ.

**ದ್ರೌಪದಿ**—ಮಹಾರಾಜನೆನ್ನ ಕಟ್ಟಕಡೆಯಿಾಬೇೞ್ಕೆಗೊಸೆ ವುದು ; ಆನೆ ಮೊದಲಗ್ನಿಯಂ ಪೊಕ್ಕಪೆಂ.

**ಯುಧಿಷ್ಠಿರಂ**—ಇಂತಪ್ಪೊಡೆ ನಾವಿರ್ವ್ವರುಂ ಒರ್ಮೊದಲ್ ಅಗ್ನಿಯಂ ಪೊಕ್ಕು ಶ್ರೇಯಂಬಡೆವಂ.

**ಚೇಟಿ**—ಹಾ ! ಪೂಜ್ಯರ್ ಲೋಕಪಾಲಕರಿರಾ ! ರಕ್ಷಿಸಿಂ ; ರಕ್ಷಿಸಿಂ. ಈರಾಯುಂ ಚಂದಿರಬಂಚದೊಳೊಗೆದ ರಾಯರಿಸಿಯಲ್ತೆ ? ರಾಜಸೂಯಯಜ್ಞದಿಂ ಯಜ್ಞೇಶನಂ ತುಷ್ಟಿವಡಿಸಿದನುಂ ಖಾಂಡವ ವನದಿಂದನಲನಂ ತಣಿಸಿದರ್ಜುನನ ಜ್ಯೇಷ್ಠಭ್ರಾತೃವುಂ ಸುಗೃಹೀತ ನಾಮಧೇಯನುಂ ಆದ ಮಹಾರಾಜಯುಧಿಷ್ಠಿರಂ; ಈಕೆ ಪಾಂಚಾಲ ರಾಜನ ಕುಲದೇವತೆಯುಂ ಜನ್ನಗೊಂಡದ ನಡುವಣಿಂ ಜನಿಸಿದಳು ಮಾದ ದ್ರೌಪದೀದೇವಿಯಲ್ತೆ ? ನಿಷ್ಕರುಣಂಗಳೀರೊಡಲ್ಗಳುಂ ಕಾಲಾ ಗ್ನಿಗಿಂಧನಂಗಳಕ್ಕುಂ; ಅದಱಿಂ ರಕ್ಷಿಸಿಂ; ರಕ್ಷಿಸಿಂ. (ಅವರಿರ್ವರ ಮುಂದೆ ಮೆಯ್ಯಿಕ್ಕಿ) ಒಡತಿಯುಮೊಡೆಯನುಂ ಮಾಟ್ಪ ಕಜ್ಜಮಿದೇಂ ?

**ಯುಧಿಷ್ಠಿರಂ**—ಎಲೆ ಬುದ್ಧಿಮತಿಕೆ ! ಕಾಂತನುಂ ಪ್ರಿಯ ಸಹೋದರನುಮಿಲ್ಲದಂದು ಆವುದು ತಗುಗುಮದು ; ಭದ್ರೆ ! ಏೞೇೞ್ ; ನೀರಂ ತಾ.

**ಚೇಟಿ**—ಮಹಾಪ್ರಭು ಬೆಸಸಿದಂತೆ (ಎಂದು ಪೋಗಿ ಮಗುೞ್ದು ತಂದು) ಇದು ಜಲಪೂರಿತಂ ಕನಕಕಮಂಡಲು.

**ಯುಧಿಷ್ಠಿರಂ**—ಪಾಂಚಾಲಿ ! ನೀನುಂ ನಿನ್ನ ಕಟ್ಟೊಲವಿನ ಭೀಮಂಗಂ ಪ್ರಿಯಂಗರ್ಜುನಂಗಂ ಜಲಾಂಜಲಿಯಂ ಕುಡು.

**ದ್ರೌಪದಿ**—ಮಹಾರಾಜನೆ ! ನೀನೆ ಕುಡು ; ನಾನಗ್ನಿಪ್ರವೇ ಶಮಂ ಮಾೞ್ಪೆಂ.

**ಯುಧಿಷ್ಠಿರಂ**—ಎಲೆ ಮಾನ್ಯೆ ! ಲೋಕಸಂಪ್ರದಾಯಮಂ ಮೀಱುವುದಾಗದು. (ಚೇಟಿಯಂ ನೋಡಿ) ಭದ್ರೆ ! ನೀರನುಯ್.

**ಚೇಟಿ**—(ನೀರನುಯ್ಗುಂ)

**ಯುಧಿಷ್ಠಿರಂ**—(ಕಾಲ್ಗಳನಲುಂಬಿ ಆಚಮನಂಗೆಯ್ದು ಜನ್ನವಿರಮಂ ಎಡಂದೊಟ್ಟು) ಈಜಲಾಂಜಲಿ ಗಂಗಾಪುತ್ರನುಂ ಆಚಾರ್ಯನುಂ ಆದ

ಭೀಷ್ಮಂಗೆ. ಇದು ಪ್ರಪಿತಾಮಹಂಗೆ ಶಂತನುವಿಂಗೆ. ಈಜಲಾಂಜಲಿ ಪಿತಾಮಹಂಗೆ ವಿಚಿತ್ರವೀರ್ಯಂಗೆ. (ಕಣ್ಣೀರೊಡನೆ) ತಾತಂಗೆ ಕುಡುವ ಪೊೞ್ತಿದು. ಈಜಲಾಂಜಲಿ ಪೂಜ್ಯನುಂ ಸ್ವರ್ಗಸ್ಥನುಂ ಗುರುವುಂ ಸುಗೃಹೀತನಾಮಧೇಯನುಮಪ್ಪಾದೆಮ್ಮ ಪಿತರಂಗೆ ಪಾಂಡುವಿಂಗೆ.

ಇಂದು ಮೊದಲ್ ಸಲಿಲಾಂಜಲಿ |
ಮುಂದಿದು ನಿನ್ನತ್ತಣಿಂದೆ ದುರ್ಲಭಮೆನಿಕುಂ ||
ತಂದೆಯೆ ನಾನಿತ್ತುದನೊಲ |
ವಿಂದಂ ನೀನೆಮ್ಮ ಮಾತೆಯೊಡನೀಂಟೀಗಳ್ ||೧೯೨||

ಜಲಜಾತಾರುಣಲೋಚನಂಗಿದು ಜಲಂ ಭೀಮಂಗೆಲ್ಲೈ ವತ್ಸನೇ | ಸಲೆ ನಾವಿರ್ವರುವಿರ್ದಾಂಟಲಿಕ್ಕಿದವಿಭಕ್ತಂ ತೃಷ್ಣೆಯಿಂದೀಗಳಾ || ಕುಲನಾಗಿರ್ದಪೆಯೊರ್ಚ್ಚಣಂಬರವಿರುತ್ತಿಂತಾದೊಡಂ ಸೈಸು ನೀ | ನೊಲವಿಂ ನಿನ್ನೊಡನತ್ತಲೀಂಟಲಿದೆಕೊಳ್ ನಾಂ ಭೋಂಕನೆಯ್ತಂದಪೆಂ ||

ಒಂದುಪಕ್ಷದೊಳ್ ಕ್ಷತ್ರಿಯೋತ್ತಮರ ಗತಿಯಂ ಪಡೆದ ವತ್ಸನಂ ಬೆಂಗೊಂಡೊಡಂ ಸಯ್ಪಿಲಿ ನಾನವನಂ ನೋಡಲನರ್ಹಂ. ವತ್ಸ! ಭೀಮ!

ಜನನೀಸ್ತನ್ಯಮನೀಂಟಿ ನಾಂ ಬೞಿಕಮೇ ನೀನೀಂಟಿದೆಯ್ ವತ್ಸ ಜೀ | ವನಮಂ ಮಾಡಿದೆ ತಿಂದು ನೀನೊಲವಿನೆನ್ನುಚ್ಛಿಷ್ಟಮಂ ಸ್ವಾದುವಂ || ಎನಗಂ ಮೇಣ್ ನಿನಗಂ ಮಖಂಗಳೊಳಮಿಂತಲ್ತೇ ಕ್ರಮಂ ಸೋಮಸೇ | ವನೆಯಲ್ಲಿಂತು ಮೊದಲ್ನಿವಾಪಜಳಮಂ ನೀನೀಗಳೆಂತೀಂಟುವೈ ||೧೯೪||

ಕೃಷ್ಣೆ! ನೀನುಂ ಜಲಾಂಜಲಿಯುಂ ನೀಡು.

**ದ್ರೌಪದಿ**—ಸಖಿ! ಎನಗೆ ನೀರಂ ಕುಡು.

**ಚೇಟಿ**—(ಅಂತು ಮಾೞ್ಪಳ್)

**ದ್ರೌಪದಿ**—(ಆಚಮನಂಗೆಯ್ದು ಅಂಜಳಿಯೊಳ್ ನೀರಂ ತೀವಿ) ಮಹಾರಾಜನೆ! ಆರ್ಗೆ ಜಲಾಂಜಲಿಯಂ ಕುಡುವುದು?

**ಯುಧಿಷ್ಠಿರಂ**—ಕೃಷ್ಣೆ!

ಜನಯಿತ್ರಿಗಮಾವಂ ರೊಂ |
ದನದೊಳ್ ಗಾಂಧಾರಿಯೊಡನೆ ಸಾದೃಶ್ಯಮನಿಂ ||
ದನುಗೆಯ್ದನೊ ದಿವಮಂ ಪೋ೦ |
ಕನೆಯ್ದುತಿರ್ಪ್ಪಂಗವಂಗೆ ಕುಡುವುದು ಜಳಮಂ ||೧೯೫||

**ದ್ರೌಪದಿ**—ಕಾಂತ! ಪರಿಜನಂ ತಂದಿತ್ತೀಜಳಂ ಸಗ್ಗದೊಳಂ ನಿನಗೆ ಪಾದ್ಯಮಕ್ಕುಂ.

**ಯುಧಿಷ್ಠಿರಂ**—ಅರ್ಜುನಾಗ್ರಜ!

ಪರಿಪೂರಿಸದೆಯೆ ಪ್ರೊಣ್ಕೆಯು |
ನುರುಭುಜಬಲಶಾಲಿ ನೀಂ ಪರಂಧಾಮವನೆ ||
ಯ್ದಿರೆ ಸಲಿಲಮನೀಂಗಳ್ ನಿ |
ನ್ನರಸಿಯಿವಳ್ ಮುಕ್ತಕೇಶಿಯಾಗಿಯೆ ಇತ್ತಳ್ ||೧೯೬||

**ದ್ರೌಪದಿ**—ಮಹಾರಾಜ! ಏಟ್; ನಿನ್ನ ಸೋದರಂ ದೂರಮೆಯ್ದಗುಂ.

**ಯುಧಿಷ್ಠಿರಂ**—(ಬಲಗಣ್ಣದಿರ್ವುದಂ ಸೂಚಿಸಿ) ಪಾಂಚಾಲಿ! ಶಕುನಂಗಳ್ ಭೀಮನಂ ಮನ್ನಿಪೆಯೆಂದೆನಗೆ ಪೇೞ್ಗುಂ. ಆಕ್ಕೆ; ತಳ್ವದೆ ಅಗ್ನಿಯೆಡೆಗೆ ಪೋಪಂ.

**ದ್ರೌಪದಿ**—ಆಃ! ಭಗವಂತಂ ಪಾವಕಂ ಧಗಧಗನೆ ಪಜ್ಜಳಿಸಿದಂ.

**(ನೇಪಥ್ಯದೊಳ್ ಮಹಾಕಲಕಲಮಪ್ಪುದು.)**

**ಕಂಚುಕಿ**—(ಸಂಭ್ರಾಂತನಾಗಿ ಪೊಕ್ಕು) ಮಹಾರಾಜಂ ರಕ್ಷಿಪುದು; ರಕ್ಷಿಪುದು. ಇದೆ ಕೇಡಿಗಂ ಕೌರವಾಧಮಂ ರಕ್ತಾಭಿಷೇಕದಿಂ ವಸ

ನಮಂ ರಕ್ತಂಗೆಯ್ದು ಕೆಂಗಣ್ಣನಾಗಿ ಭೀಕರಮಂ ಗದಾಯುಧಮಂ ಕೈಯೊಳೆ ಪಿಡಿದು, ಕಾಲದಂಡಮಂ ಪಿಡಿದ ಕೃತಾಂತಂಬೊಲ್ ಕಾಣುತ್ತುಂ ಮಾನ್ಯೆಯುಂ ಪಾಂಚಾಲರಾಜಕನ್ಯೆಯುಂ ಅತ್ತಿತ್ತಲಟ ಸುತ್ತುಂ ಇತ್ತಲೆ ಇದಿರ್ವಂದಪಂ.

**ಯುಧಿಷ್ಠಿರಂ**—ಹಾ! ಚೀ! ಸಂದೇಹಪರಿಹಾರವಾದುದು. ಹಾ! ಗಾಂಡೀವಧನುರ್ಧರ! (ಎಂದು ಮೂರ್ಛೆಗೊಳ್ವಂ)

**ದ್ರೌಪದಿ**—ಹಾ! ಆರ್ಯಪುತ್ರ! ಸ್ವಯಂವರದೊಳ್ ಸ್ವಬಾಹು ಬಲದಿಂ ಪಡೆದ ಮಡದಿಯೊಡೆಯನೆ! ಅರ್ಜುನ! ಪ್ರಿಯಭ್ರಾತೃವಂ ಭೀಮನನೊರ್ವನನೆ ಮನ್ನಿಪೆ; ಮಾರಾಯನುಮಂ ಈತೊಟ್ಟುಮಂ ಮನ್ನಿಸೆ.

**ಕಂಚುಕಿ**—ಮಹಾಪ್ರಭುವೆ! ಸಮಾಧಾನವೊಂದು; ಸಮಾಧಾನ ವೊಂದು.

**ಯುಧಿಷ್ಠಿರಂ**—ಹಾ ವತ್ಸ! ಸವ್ಯಸಾಚಿಯೆ! ಹಾ! ಕನಲ್ದ ಮುಕ್ಕಣ್ಣನ ಮೆಯ್ಯ ತೀಟವೆಂಬ ಸಾಸಕ್ಕೆ ತಕ್ಕ ಜಟ್ಟಿಗನೆ! ಹಾ! ನಿವಾತಕವಚರನೊಕ್ಕಲಿಕ್ಕಿ ಸಗ್ಗಮಂ ನಿಷ್ಕಂಟಕವೆನಿಸಿದನೆ! ಹಾ! ಬದರ್ಯಾಶ್ರಮದ ಮುನಿಗಳೊಳ್ ಎರಡನೆಯ ತವಸಿಯೆ! ಹಾ! ದ್ರೋಣಾಚಾರ್ಯಪ್ರಿಯಶಿಷ್ಯನೆ! ಹಾ! ಮಹಾಸ್ತ್ರವಿದ್ಯಾಭ್ಯಾಸದಿಂ ಭೀಷ್ಮನಂ ಮೆಚ್ಚಿಸಿದನೆ! ಹಾ! ಕರ್ಣನ ಕುಲಮೆಂಬ ಕಮಲಿನಿಗೆ ಸಾರಮಾದ ಮಂಜೆನಿಸಿದ ಬಾಣಪುಂಜದಿಂ ರಂಜಿತನಾದವನೆ! ಹಾ! ಗಂದರರತ್ತಣಿಂ ದುಜ್ಯೋದನನಂ ಬಿಡಿಸಿದವನೆ! ಹಾ! ಎನ್ನ ನುಡಿಯ ಪರಿಪಾಲಕನೆ! ಹಾ! ಪಾಂಡುಕುಲಮೆಂಬ ಪದ್ಮವನಕೆ ರಾಯಂಚೆ ಯೆನಿಸಿದವನೆ!

ಮಾಡದೆ ತಾಯ್ಗೆ ವತ್ಸಲೆಗೆ ವಂದನಮಂ ಸುವಿನೀತಭಾವದಿಂ |
ಗಾಡದೆ ನನ್ನ ತಟ್ಟಿಸದೆ ವತ್ಸನೆ ಕೊಳ್ಳದೆ ನನ್ನನುಜ್ಞೆಯಂ ||

ನೋಡದೆಯೀಸ್ವಯಂವರವಧೂಮಣಿಯಂ ಸುಗುಣಾನುರೂಪೆಯಂ |
ಮಾಡಿದೆಯಾಗಳೆಂತುಟೆಲೆ ನೀನಿದುಮಂ ಸುಚಿರಪ್ರವಾಸಮಂ ||೧೯೭||

(ಎಂದು ಮೂರ್ಛೆಗೊಳ್ವಂ)

**ಕಂಚುಕಿ**—ಅಃ ಕಷ್ಟಂ ಕಷ್ಟಂ!! ಇದೆ ದುರಾತ್ಮನಿವಂ ಕೌರವಾಧಮಂ ಮನವೊಲ್ದಂತೆ ಇತ್ತಲೆ ನಡೆತರುತಿರ್ದಪಂ.

**ಯುಧಿಷ್ಠಿರಂ**—ಸರ್ವಪ್ರಕಾರಂಗಳಿಂದಮುಂ ಈಪೊಟ್ಟಿಂಗೀ ಪ್ರತೀಕಾರಮೆ ತಗುಗುಂ. ಭದ್ರೆ ಬುದ್ಧಿಮತಿಕೆ! ಮಾನ್ಯೆಯಂ ಈ ಪಾಂಚಾಲಿಯಂ ಚಿತಿಯೆಡೆಗೆ ಕರೆದುಯ್. ಆನುಮಿವಳ ಪಿಂತೆಯೆ ಬರ್ಪೆಂ.

**ಚೇಟಿ**—ರಕ್ಷಿಸಿಂ ; ರಕ್ಷಿಸಿಂ.

**ಕಂಚುಕಿ**—(ಚೇಟಿಯಂ ನೋಡಿ) ಎಲೆ ಭದ್ರೆ! ಇದೇಂ? ಈಗಳ್ ಒಡತಿಯ ಸೋದರನಂ ಧೃಷ್ಟದ್ಯುಮ್ನನಂ ಮೇಣ್ ನಕುಲಸಹದೇವರಂ ರಕ್ಷಿಸವೇಟ್ಕುಮೆಂದು ಮೊರೆಯಿಡುವಾ? ಮಹಾರಾಜನಿಂತಪ್ಪವತೆಯೊಳಿರ್಩್ಪರೆಂದು ಮೇಣ್ ಭೀಮಾರ್ಜುನರ್ ದಿವಕ್ಕೆ ಸಂದಿರ್ಪರೆಂದು ರಕ್ಷಣೆಯಾಸೆಯಿಲ್ಲಂ.

(ನೇಪಥ್ಯದಲ್ಲಿ ಕಲಕಲವಾದಿಂ ಬಟಿಯುಂ).

ರಕ್ತಾಸವಮನೀಂಟೆ ಮದಿಸಿದ ಯಕ್ಷರಾಕ್ಷಸಪಿಶಾಚಗ್ರಹಬೇತಾಳಂಗಳುಂ ಕಾಗೆಪದ್ದುನರಿಗಳುಮಳುಂಬಮಿರ್ಪ್ಪಿನಂ, ಸ್ಯಮಂತಪಂಚಕದ ಸುತ್ತಲುಂ ಸುತ್ತುತಿರ್ಪ್ಪ ಎಲೆಎಲೆ ವಿರಲಯೋಧರಿರಾ! ಎನ್ನಂ ಕಂಡು ಬೆದಱಿ ಬೆಬ್ಬಳಂಬೋಪುದು ಸಾಲ್ಗುಂ, ಸಾಲ್ಗುಂ. ದ್ರೌಪದಿಯೆತ್ತಲಿರ್ಪ್ಪಳ್? ಪೇಟಿಂ. ಆಕೆಯ ನೆನೆಪಿನ ಕಜ್ಜಪನದಾವುದಂ ಪೇಟಿತ್ವಂ?

ಅವಿಹಿತಲೀಲೆಯಿಂ ತೊಡೆಗಳಂ ಕರದಿಂ ಮಿಗೆ ತಟ್ಟುತಿರ್ದ್ದ ಕೌ |
ರವನಿದಿರಲ್ಲದಾವಳ ದುಕೂಲಚಯಂ ಸೆಳೆದಿಟ್ಟುದಾಯ್ತೊ ಮೇಣ್ ||

ಅವನನುಜಾತನೀಟಿ‍ದ್ದುಟಿಯುಲಾವಳ ವೇಣಿ ವಿಕೀರ್ಣವಾದುದೋ |
ನಿವಸಿಪಳೆಲ್ಲವಳ್ ದ್ರುಪದರಾಜತನೂಜೆಯೆಲ್ಲೈ ನಿರೂಪಿಸಿಂ ||೧೯೮||

**ಕಂಚುಕಿ**—ಹಾ ದೇವಿ! ಯಾಜ್ಞಸೇನಿ! ಅನಾಥೆಯುಂ ನಿನ್ನ ನೀಗಳ್ ಭರತಕುಲಕಳಂಕನಿವಂ ಅಪಮಾನಂಗೊಳಿಪಂ.

**ಯುಧಿಷ್ಠಿರಂ**—(ಭೋಂಕನೆದ್ದು) ಪಾಂಚಾಲಿ! ಅಂಜದಿರ, ಅಂಜದಿರ. ಎನ್ನ ಡೊಣೆಯುಂ ಬಿಲ್ಲಂ ತನ್ನಿಂ. ಎಲವೊ ದುರಾತ್ಮ! ದುರ್ಯೋಧನಹತಕ! ಬಾ ಬಾ; ಗದಾಯುದ್ಧದ ಜಾಣ್ಮೆಯಿಂ ದೊರೆಕೊಂಡ ನಿನ್ನ ಭುಜಗರ್ವದ ಸರ್ವಸ್ವಮುಮಂ ನೀನಾರಯ್ಯದ ಎನ್ನ ಸರಲ್ಗಳ ಸಂತತಸಂಪಾತದಿಂ ವಿಧ್ವಂಸಿಪೆಂ. ಅಲ್ಲದೆಯುಂ ಎಲವೆಲವೊ !!

ಕಡುರಾಗಕ್ಕಾಶ್ರಯಂ ತಾನೆನಿಪ ಜಿತಜರಾಸಂಧನಂ ತಮ್ಮನಂ ಮೇಣ್ | ಮೃಡನೊಳ್ ಸಂಕ್ರುದ್ಧನೊಳ್ ವ್ಯಾಧನೊಳಿರ್ದು ಪೋಣದಾರ್ವತ್ಸನಂ ಕಾಣದೀಗಳ್ || ಘಡ ಕೌರವ್ಯಾಧಮಾ ನಿನ್ನವೊಲತಿಕಠಿನಂ ಜೀವಿಸಲ್ ಶಕ್ತನಲ್ಲಾ | ದೊಡೆ ಬಾಣಾಸಾರದಿಂ ನಿನ್ನಸುಗಳನೆಟ್ಟಿಯಲ್ ಶಕ್ತನಾಗಿರ್ದಪೆಂ ನಾಂ ||೧೯೯||

(ಬಟಿಕೆ ರಕ್ತಾರ್ದ್ರವಾದ ಮೆಯ್ಯುಳ್ಳಂ ಗದಾಪಾಣಿ ಭೀಮಂ ಪುಗುವಂ.)

**ಭೀಮಂ**—(ಅತ್ಯುದ್ಧತನಾಗಿ ಸುತ್ತಾಡಿ) ಎಲೆ ಸ್ಯಮಂತಪಂಚಕಸಂಚಾರಿಗಳಾದ ಸೈನಿಕರಿರಾ! ಇದೇನಿದು ನಿಮ್ಮ ಭಯಸಂಭ್ರಮಂ ?

ಅಸುರಂ ನಾನಲ್ತು ಬೂತಲ್ತರಿಯ ರಕುತದಿಂ ನಾಂದುದೆನ್ನೀಯೊಡಲ್ ಮಾ | ಮಸಕಂಬೆತ್ತಂ ಪ್ರತಿಜ್ಞಾಗಹನಜಲಧಿಯುತ್ತಾರದಿಂ ಕ್ಷತ್ರನಪ್ಪೆಂ || ಪ್ರಸರದ್ಯುದ್ಧಾಗ್ನಿನಿರ್ದಗ್ಧರೊಳುಳಿದೆಲೆ ರಾಜನ್ಯರೇ ನೀಮಿದಂ ಸಾ | ಧ್ವಸಮಂ ನೀಗಿಂ ಹತಾಶ್ವದ್ವಿಪತತಿಯೊಳಿದೇಂ ಗುಪ್ತರಾಗಿಂತು ನಿಲ್ವಿರ್ ||೨೦೦||

**ಕಂಚುಕಿ**—ಎಲೆ ದೇವಿ! ಪಾಂಡುರಾಜನ ಸೊಸೆಯೆ! ಏಟೇಟಿಲ್, ಈಗಳ್ ತೊಟ್ಟನೆ ಚಿತೆವುಗುವುದೇ ಮೇಲ್.

**ದ್ರೌಪದಿ**—(ಭೋಂಕನೆೞ್ದು) ಇದೇಂ ಇನ್ನುಂ ಚಿತೆಯೆಡೆಯಂ ಸೇರೆನೇ? (ಎಂದು ಚಿತೆಯಿದಿರೊಳ್ ನಿಲ್ವಳ್).

**ಯುಧಿಷ್ಠಿರಂ**—ಆದಾರಿಲ್ಲಿ? ಎನ್ನ ಪೊಡಿಗೆವಿಲ್ಗಳಂ ತಂದೀವುದು (ಇನಿಸು ಸುಮ್ಮನಿರ್ದು) ಇದೇಂ? ಪರಿಚರನೊರ್ವನುಮಿರಂ. ಅಕ್ಕೆ; ನಿಯುದ್ಧದಿಂದಮೆ ಕೇಡಿಗನಂ ಸಂಮರ್ದಿಸಿ ಕಟ್ಟಿ ಅಗ್ನಿಯೊಳ್ ಕೆಡೆಪುವೆಂ (ಎಂದು ಕಾಚೆಯಂ **ಕಟ್ಟುವಂ**).

**ಕಂಚುಕಿ**—ದೇವಿ! ದುಶ್ಶಾಸನನ ಕೈಸೋಂಕಿನಿಂ ದೂಷಿತವೆನಿಸಿ ಕಣ್ಗಳಂ ಮುಸುಕುತಿಪ್ಪುದನೀಕೇಶಪಾಶಮಂ ಕಟ್ಟು. ಪ್ರತೀಕಾರಂ ಗೆಯ್ವೆಂಬಾಸೆ ಈಗಳ್ ಅಸ್ತಮಿತಮಾದುದು; ಭೋಂಕನೆ ಚಿತಿಯೆಡೆಯನೆ ಎಯ್ದುವಂ.

**ಯುಧಿಷ್ಠಿರಂ**—ದೇವಿ! ಭೀಮಾರ್ಜುನಶತ್ರುವೆನಿಸಿದಂ ದುರಾತ್ಮಂ ದುರ್ಯೋಧನಹತಕಂ ಹತನಪ್ಪುದರ್ಕೆ ಮುನ್ನಮೆ ಕೇಶಪಾಶಂಗಟ್ಟುವುದು ಉಚಿತಮಲ್ತು.

**ಭೀಮಂ**—(ಬೆಚ್ಚರವೆಯ್ದಿ) ಪಾಂಚಾಲಿ! ದುಶ್ಶಾಸನಂ ಕೆದಱಿಟ್ಟ ಜಡೆಯಂ ಆಂ ಜೀವಿಸಿಪ್ಪಂದು ನೀಂ ನಿನ್ನ ಕೈಯಿಂ ಕಟ್ಟುವುದುಚಿತಮಲ್ತು. ಎಲೆ ಭೀರು! ನಿಲ್; ಈಗಳ್ ಎಲ್ಲಿ ಪೋಪೆ?

(ಎಂದು ಮುಡಿವಿಡಿಯಲಾಟಿಪಂ).

**ಯುಧಿಷ್ಠಿರಂ**—(ಬೆಚ್ಚರಂ ಭೀಮನಂ ಬಿಮ್ಮನಪ್ಪಿ) ಭೀಮಾರ್ಜುನಶತ್ರುವೆನಿಸಿದೆಲವೊ ದುರಾತ್ಮ ದುರ್ಯೋಧನಹತಕ!

ಎಂದುಂ ಶೈಶವದಂದಿನಿಂ ರಚಿಸಿದೈ ನಾನಾಪರಾಧಂಗಳಂ |
ಸಂದೃಪ್ತಂ ನೃಪಪುತ್ರರಂ ಜಯಿಸಿದೈ ಬಾಹಾಮದೋದ್ರೇಕದಿಂ ||

ಇಂದೆನ್ನೀಭುಜಪಂಜರಾಂತರದೊಳೇ ಸಿಲ್ಕಿರ್ದ್ದಪ್ಪೈ ಜೀವಿಸು |
ತ್ತೊಂದಂ ಪಜ್ಜೆಯನಾದೊಡಂ ಗಮಿಸೆ ನೀಂ ಮುಂತಣ್ಗೆ ಲ್ಪೈ ಪಾಪಿಯೇ||

**ಭೀಮಂ**—ಇದೇಂ ಆರ್ಯಂ ದುರ್ಯೋಧನನೆಂಬ ಶಂಕೆಯಿಂದೆನ್ನಂ ಕನಲ್ದು ನಿರ್ದಯಂ ತಟ್ಟಿಗೆಯ್ವಂ? ಆರ್ಯ! ಪ್ರಸನ್ನನಾಗು; ಪ್ರಸನ್ನನಾಗು.

**ಕಂಚುಕಿ**—(ಬಟ್ಟಿಸಾರ್ದು ನೋಡಿ ಸಂತಸದಿಂ) ಮಹಾರಾಜ! ಮೋಸಂಬೋಪೆ; ಮೋಸಂಬೋಪೆ. ಈತಂ ಆಯುಷ್ಮಂತಂ ಕುಮಾರ ಭೀಮಸೇನನಲ್ತೇ? ದುರ್ಯೋಧನನ ನೆತ್ತರಿಂ ಮೆಯ್ವಟ್ಟಿಗಳೆಲ್ಲಂ ಕೆಚ್ಚನಿಪ್ಪುರ್ದಱಿಂ ಈತನ ಪರಿಜು ನಿರಿಕಿಸಲರಿದು; ಸಂದೆಗಂಬಡೆವುದಾಗದು.

**ಚೇಟಿ**—(ದ್ರೌಪದಿಯಂ ಅಪ್ಪುಕಿಸಿ) ದೇವಿ! ಸಮಾಧಾನವೊಂದು. ಅರಸಿ! ಈತಂ ಕುಮಾರಭೀಮಸೇನಂ. ತನ್ನ ಪೂಣ್ಕೆಯಂ ತೀರ್ಚಿ ನಿನ್ನ ವೇಣಿಯಂ ಕಟ್ಟಲಱಿಸುತಿರ್ದ್ದಪಂ.

**ದ್ರೌಪದಿ**—ಚೇಟಿ! ಒಸಗೆವಾತಿನಿಂದೆನ್ನಂ ಸಂತವಿಡುವಾ?

**ಕಂಚುಕಿ**—ಮಹಾರಾಜ! ಮೋಸಂಬೋಪೆ. (ಎಂದು ಮುಂಪೇಟ್ದುದಂ ಪೇಟ್ವಂ.)

**ಯುಧಿಷ್ಠಿರಂ**—(ಸಂತಸದಿಂ) ಆರ್ಯ ಜಯಂಧರ! ತಥ್ಯಂ ವಿದಿತಮಾಯ್ತೇ? ನಿಕ್ಕುವಮಿವಂ ಭೀಮನೇ?

**ಕಂಚುಕಿ**—ಈತಂ ತಮ್ಮನ ಪಗೆ ನೀಚದುರ್ಯೋಧನನಲ್ತು.

**ಭೀಮಂ**—ಆರ್ಯ! ಅಜಾತಶತ್ರೂ! ಕುಂತೀಕುಮಾರ! ದೇವ! ಭೀಮಾರ್ಜುನಾಗ್ರಜ! ಈಗಳುಂ ನೀಚದುರ್ಯೋಧನನಿರ್ದ್ದಪನೇ? ನಿನ್ನ ಪಗೆಯುಂ ಪಾಂಡವತಿರಸ್ಕಾರಿಯುಮಾದಾದುರಾತ್ಮನ—

ತನು ಬಿಟ್ಟತ್ತಿಳೆಯಲ್ಲಿ ಭೀಮತನುವಿಂಗಾದತ್ತು ರಕ್ತಾರ್ದ್ರಚಂ |
ದನದಣ್ಪಾರ್ಯನನೊಂದಿದಳ್ ಸಿರಿ ಚತುಸ್ಸಿಂಧೂಲ್ಲಸದ್ಭೂಮಿಯಿಂ ||

ಅನುಗರ್ ಮೇಣ್ ಕೆಳೆಯರ್ ಭಟರ್ ಕುರುಕುಲಂ ನಿರ್ದಗ್ಧಮಾಯ್ತೆಲ್ಲಮುಂ | ಮೊನೆಯೆಂಬಗ್ನಿಯೊಳಾದೊಡೊಂದುಟಿದುದೀಗಳ್ ಧಾರ್ತರಾಷ್ಟ್ರಾಹ್ವಯಂ ||೨೦೨||

**ಯುಧಿಷ್ಠಿರಂ**—(ಒಲ್ಪಂತೆ ಬಿಟ್ಟು ಭೀಮನಂ ನೋಡಿ ಕಣ್ಣೀರ್ಗಳ ನೊರಸುವಂ.)

**ಭೀಮಂ**—(ಕಾಲ್ಗಳೊಳ್ ಬೀೞುತ್ತೆ) ಆರ್ಯಂಗೆ ಜಯಮಕ್ಕೆ.

**ಯುಧಿಷ್ಠಿರಂ**—(ಸಂತಸದಿಂ ಪಿಡಿದೇೞಿಸಿ, ತೞ್ಕೈಗೆಯ್ದು ಕಣ್ಣೀರಿಡುತ್ತೆ) ತಾತ! ವೃಕೋದರ! ಭೀಮಸೇನ! ಕುಂತೀಪುತ್ರ! ಅರ್ಜುನಾಗ್ರಜ! ಎನ್ನ ಆಜ್ಞಾಧಾರಕ! ಪಾಂಡವಕುಲಪ್ರದೀಪ!

**ಭೀಮಂ**—ಆರ್ಯನಾಜ್ಞಾಪಿಸವೇೞ್ಕುಂ.

**ಯುಧಿಷ್ಠಿರಂ**—ವತ್ಸ! ಕಣ್ಬನಿ ಕವಿದಿರ್ಪುದಱಿಂ ನಿನ್ನ ಮೊಗಚಂದಿರನಂ ಎಡೆವಿಡದೆ ನೋಡಲರಿದು. ಪೇೞ್; ಅರ್ಜುನಂ ಬೆರಸು ನೀಂ ಜೀವಿಸಿರ್ದಪ್ಪೈ?

**ಭೀಮಂ**—ಆರ್ಯ! ಮಹಾರಾಜಂ ನೀನರಿಕುಲಮನೆಲ್ಲಂ ಸಂಹರಿಸಿ ಕಣ್ಗೊಳುತಿರೆ, ಭೀಮಾರ್ಜುನರಿರ್ವ್ವರುಂ ಜೀವಿಸಿರ್ದಪರ್.

**ಯುಧಿಷ್ಠಿರಂ**—(ಪ್ರೀತಿಯಿಂ ಮತ್ತೆ ಗಾಢಾಲಿಂಗನಂಗೆಯ್ದು) ತಾತ!

ಅರಿಸಂಹಾರಮದಿರ್ಕ್ಕೆ ಪೇೞೆನಗೆ ನೂಱುಂಸೂೞ್ ಬಕಾರಾತಿಯುಂ! ಪರಮಂ ಸೋದರನುಂ ಮನಃಪ್ರಿಯನುಮಾದಾಭೀಮನೇಂ ನೀಂ ವಲಂ ||

**ಭೀಮಂ**—ಆರ್ಯ! ಅವನೆ ನಾಂ; ಅವನೆ ನಾಂ.

**ಯುಧಿಷ್ಠಿರಂ**—

ಧುರದೊಳ್ ರಕ್ತಜಲಪ್ರಪೂರಿತಜರಾಸಂಧೋರುವಕ್ಷಸ್ಸರೋ |
ವರದುತ್ಪಾತವಿನೋದಕೊಲ್ದಮಕರಂ ನೀನೇನೆಲ್ಲೈ ಭವ್ಯನೇ ||೨೦೩||

**ಭೀಮಂ**—ಅಪ್ಪುದು. ಆರ್ಯ! ಒಚ್ಚಱಣಂ ಎನ್ನಂ ಬಿಡು.

**ಯುಧಿಷ್ಠಿರಂ**—ಪೆಱತೇನುೞಿದಿರ್ಕ್ಕುಂ?

**ಭೀಮಂ**—ಕಡುವಿರಿದುೞಿದಿರ್ಕ್ಕುಂ: ದುಶ್ಶಾಸನನೆೞೆದ ಪಾಂಚಾಲೀಕೇಶಪಾಶಮಂ ದುಶ್ಶಾಸನದುರ್ಯೋಧನರ್ಕಳ ನೆತ್ತರಿಂ ನಾಂದ ಕರದಿನಿದಱುಂ ಕಟ್ಟುವೆಂ.

**ಯುಧಿಷ್ಠಿರಂ**—ನೀಂ ಸಾರ್; ದೀನೆ ವೇಣೀಸಂಹಾರಮನನುಭವಿಕೆ.

**ಭೀಮಂ**—(ಪತ್ತಸಾರ್ದು) ಮಾನ್ಯೆ! ಎಲೆ ಪಾಂಚಾಲರಾಜಕನ್ಯೆ! ದೈವಯೋಗದಿಂ ರಿಪುಕುಲಮೆಲ್ಲಮುೞಿಯೆ ಸಂತುಷ್ಟೆಯಾಗಿ ನೀನೆೞೆಗಿ ವಡೆವಾ?

**ದ್ರೌಪದಿ**—(ಸನಿಹಕ್ಕೆ ಬಂದು) ಕಾಂತಂಗೆ ವಿಜಯಮಕ್ಕೆ (ಎಂದು ಅರ್ಧೋಕ್ತಿಯೊಳ್ ಭಯಂಗೊಂಡು ಕೆಲಕೆ ಸರಿವಳ್)

**ಭೀಮಂ**—ಎಲೆ ಭೀರು! ರಾಜಪುತ್ರಿ! ಈಪರಿಯೊಳಪ್ಪುಸಂ ಕಂಡು ನೀನಂಜದಿರ; ನೋಡು—

ಜನಪರ್ ಸೇರ್ದಂದು ನಿನ್ನಂ ಪಿಡಿದೆೞೆದ ಪಶುಪ್ರಾಯದುಶ್ಶಾಸನಭ್ರ | ಷ್ಟನ ರಕ್ತಂ ಪೀತಶೇಷಂ ಕರಗತಮಿದಿದಂ ನೀಂ ಘನೀಭೂತಮಂ ಮು || ಟ್ಟಿನತೀಯಂಗಾಂಗದೊಳ್ ಸಂದುದನೆನತು ಗದಾಘಾತಕೀಡಾದ ದುರ್ಯೋ | ಧನನೂರುದ್ವಂದ್ವದಾದ್ರಾಸ್ರಮನಿದುಮನೆಲಾ ನಿನ್ನ ದುಃಖಾಗ್ನಿ ಸಂದಲ್ ||೨೦೪||

ಬುದ್ಧಿಮತಿಕೆ! ಪಾಂಡವಪತ್ನಿಯಂ ಪರಿಹಾಸಂಗೆಯ್ವಳ್ ಭಾನುಮತಿಯವಳೀಗಳೆತ್ತ? ಜನ್ಮಗೊಂಡದ ನಡುವಣತ್ತಣಿಂ ಜನಿಸಿದ ಮಾನ್ಯೆ ಎಲೆಯಾಜ್ಞಸೇನಿ!

**ದ್ರೌಪದಿ**—ನಾಥನಾದೇಶಿಸವೇೞ್ಕುಂ.

**ಭೀಮಂ**—ಮುನ್ನಾಂ ಪೇೞ್ದುದು ನಿನ್ನ ನೆನೆಪಿನೊಳಿರ್ಕುಮೋ?
"ಚಲಿತೋದ್ವೃತ್ತಭುಜಂಗಳಿಂ ತಿರುಪಿ ಪೊಯ್ದುದ್ಯದ್ಗದಾದಂಡದಿಂ |
ದಲಿತೋರುದ್ವಯನಾದ ಕೌರವನ ಗಾಢವ್ಯಾಪ್ತದಿಂ ರಕ್ತದಿಂ ||
ಸಲೆ ಚೆಂಬಣ್ಣಮನಾಂತು ರಂಜಿಸಿದ ಪಾಣಿದ್ವಂದ್ವದಿಂ ಭೃಂಗಕುಂ |
ತಲೆಯೇ ನಿನ್ನಯ ಕೇಶಪಾಶಮನಿದಂ ಭೀಮಂ ವಲಂ ಕಟ್ಟುವಂ ||"
ಎಂಬುದು.

**ದ್ರೌಪದಿ**—ಕಾಂತ! ನಾಡೆಯುಂ ನೆನೆಪಿನೊಳಿರ್ಕುಂ. ಅಲ್ಲದೆಯುಮೀಗಳನುಭವಿಸಿದಪೆಂ.

**ಭೀಮಂ**—(ದ್ರೌಪದಿಯ ಜಡೆಯುಂ ಕಟ್ಟುತ್ತೆ) ಎಲೆಮಾನ್ಯೆ! ದುಶ್ಶಾಸನನೆೞೆದುದಂ ಧಾರ್ತರಾಷ್ಟ್ರಕುಲಕ್ಕೆ ಕಾಳರಾತ್ರಿಯೆನಿಸಿದುದಂ ವೇಣಿಯನಿದಂ ನೀಂ ರಚನೆಗೊಳಿಸ.

**ದ್ರೌಪದಿ**—ಈಕಜ್ಜಮನಾಂ ಮಱೆತೆಂ; ಕಾಂತನನುಗ್ರಹದಿಂ ಮತ್ತಂ ಕಲ್ತೆಂ.

**ಚೇಟಿ**—(ಜಡೆಯುಂ ಕಟ್ಟುವಳ್)

(ನೇಪಥ್ಯದೊಳಗೆ) ಯುದ್ಧಾಗ್ನಿಯೊಳ್ ಬೆಂದರ್ ದಿವಕ್ಕೆ ಸಲ್ವಿನಂ ಉೞಿದ ರಾಜಮಂಡಳಿಗೆ ಮಂಗಳಮಕ್ಕೆ.

ದುರುಳಂ ಮುನ್ನಾವುದಂ ಬಿರ್ಚಿಡೆ ಮಸಗಿ ಕೊಲುತ್ತಾಜಿಯೊಳ್ ಪಾಂಡವರ್ ದ್ವೇ | ಷ್ಯರನೀಗಳ್ ನಿಚ್ಚಮುಂ ಬಿರ್ಚಿಸಿದರೊ ಮಿಗೆ ತತ್ಸ್ತ್ರೀಶಿರೋಜಂಗಳಂ ತಾಂ || ಕುರುವಂಶೋತ್ಪಾತಚಿಹ್ನಂ ಲಯಯಮಸಮಮಾದ್ರೌಪದೀಕೇಶಪಾಶಂ | ಪರಿಬದ್ಧಂ ಲೋಕನಾಶಂ ವಿರಮಿಕೆ ವಸುಧಾಪಾಲಕರ್ಗ್ಗಕ್ಕೆ ಭದ್ರಂ ||೨೦೫||

**ಯುಧಿಷ್ಠಿರಂ**—ದೇವಿ! ವೇಣೀಬಂಧನಮನಿದನಭಿನಂದಿಸುತಿರ್ಕುಂ ಬಾನೊಳ್ ಸಂಚರಿಪ ಸಿದ್ಧವೃಂದಂ.

(ಬಟಿಕಂ ಕೃಷ್ಣಾರ್ಜುನರಿರ್ವರುಂ ಪೊಕ್ಕು ಬಟಿಸಾರ್ದ್ವರ್)

**ಕೃಷ್ಣಂ**—ರಿಪುಕುಲಸಂಹಾರಕಂಗೆ ಪಾಂಡುಕುಲಜನ್ಮಂಗೆ ಸೋದರಸಮೇತಂಗೆ ಯುಧಿಷ್ಠಿರಮಹಾರಾಜಂಗೆ ಜಯಮಕ್ಕೆ.

**ಯುಧಿಷ್ಠಿರಂ**—(ಮುಂತೆ ನೋಡಿ ಸಂತಸದಿಂ) ಅಹಹ! ಭಗವಂತಂ ಪುಂಡರೀಕಾಕ್ಷಂ; ಮೇಣ್ ವತ್ಸನರ್ಜುನಂ. ಸ್ವಾಮಿಯೆ! ಭಗವನ್ನಾರಾಯಣಂ ನೀಂ ಮಂಗಳಾಶಾಸನಮಂ ಮಾಳ್ಪುದಱಿಂದೆನಗೆ ಜಯಮಲ್ಲದೆ ಪೆಱತೇಂ ?

ವಿತತೋದ್ಯನ್ಮಹದಾದಿಕಲ್ಪನದೆ ಲೋಕಾಕಾರಮೊಂದಿರ್ಪ್ಪನಂ |
ಧೃತನಾನಾಗುಣನಂ ಜಗಜ್ಜನಿಲಯಸ್ಥಾನಂಗಳಂ ಮಾಳ್ಪನಂ ||
ವ್ಯತಿಜನ್ಮಂಗಳವಿಲ್ಲದಾತನನಚಿಂತ್ಯಸ್ವಾತ್ಮನಂ ನಿನ್ನನ |
ಚ್ಯುತನೇ ಜಾನಿಸೆ ದುಃಖಮಿಲ್ಲಮೆನೆಯಿನ್ನಾಲೋಕಿಸಲ್ ಪೇಳ್ವುದೇಂ ||

(ಅರ್ಜುನನಂ ಕಣ್ಕೆಗೆಯ್ದು) ವತ್ಸ! ಎನ್ನನಾಲಿಂಗಿಸು.

**ಅರ್ಜುನಂ**—(ಆಲಿಂಗಿಪಂ)

**ಕೃಷ್ಣಂ**—ಷಡ್ಗುಣೈಶ್ವರ್ಯಸಂಪನ್ನರ್ ವ್ಯಾಸವಾಲ್ಮೀಕಿಜಾಮದಗ್ನ್ಯಜಾಬಾಲಿಪ್ರಮುಖರಿಮಂದಿರ್ ಮಾರಿಸಿಗಳ್ ಪಲವಂ ಮಂಗಳಾಶಾಸನಂಗಳಂ ಮಾಡುತಿರ್ದ್ದಪರ್. ನಕುಲಸಹದೇವಧೃಷ್ಟದ್ಯುಮ್ನಸಾತ್ಯಕಿಮುಖ್ಯರ್ ಪಡೆವಳರುಂ ಯಾದವಮಾಗಧಮತ್ಸ್ಯಕಳಿಂಗಾದಿಗಳರಗುವರರುಂ ಪೆಗಲೊಳ್ ತೀರ್ಥೋದಕಕಲಶಂಗಳನಾಂತು ನಿನಗೆ ಅಭಿಷೇಕಮಂಗಳೋತ್ಸವಮಂ ಒಡರ್ಚಲ್ ಉಜ್ಜುಗಿಸಿರ್ದ್ದಪರ್. ಚಾರ್ವಾಕನೆಂಬಂ ರಕ್ಕಸಂ ನಿನ್ನಂ ಬಂಚಿಸಿದನೆಂದು ವ್ಯಾಸಮುಖದಿಂ ಕೇಳ್ದು ನಾನರ್ಜುನಂಬೆರಸು ನಿನ್ನ ಬಟಿಗೆ ಭೋಂಕನೆ ಬಂದೆಂ.

**ಯುಧಿಷ್ಠಿರಂ**—ಏಂ ದುರಾತ್ಮಂ ಚಾರ್ವಾಕಂ ಎಮ್ಮಂ ಬಂಚಿಸಿದನೇ ?

**ಭೀಮಂ**—(ಕೋಪದಿಂ) ಆರ್ಯಂಗೆ ಕಡುಪಿರಿದಂ ಚಿತ್ತವಿಭ್ರಮ ಮಂ ಗೆಯ್ದಾಂ ದುರ್ಯೋಧನನ ಕೆಳೆಯಂ ಆಱಟಿ ರಕ್ಕಸನೆಲ್ಲಿ?

**ಕೃಷ್ಣಂ**—ಆಕೇಡಿಗನಂ ನಕುಲಂ ನಿಗ್ರಹಿಸಿದಂ. ಎಲೆ ಮಾ ರಾಯ! ಪೆಱತೇಂ ನಿನ್ನಭಿಲಷಿತಾರ್ಥಂ?

**ಯುಧಿಷ್ಠಿರಂ**—ದೇವ ಪುಂಡರೀಕಾಕ್ಷ! ಭಗವಂತಂ ನೀಂ ಪ್ರಸನ್ನನಾಗಿ ಎಲ್ಲಮುಮಂ ನೀಡುವೆ? ಆನಾದೊಡೆ ಮನುಷ್ಯಸಾಧಾರಣ ಮಪ್ಪ ಅಸಂತುಷ್ಟಬುದ್ಧಿಯಿಂ ಇನ್ನಿದರ್ಕೆ ಪೆಱತನೆರೆಯಲ್ ಶಕ್ತ ನಲ್ಲೆಂ. ಸ್ವಾಮಿ ಕಟಾಕ್ಷಿಸುಗೆ—

ಅರಿಸಂದೋಹಮನೆಲ್ಲಮಂ ಮುಳಿಸಿನಿಂದಂ ಕೊಂದೆವೇಱುಲ್ಲದ |
ಯ್ವರುಮಾವಿರ್ದಪೆವೆನ್ನ ದುರ್ನಯಕೆ ಪಕ್ಕಾದೀಕೆ ತಾಂ ದುಃಖಸಾ ||
ಗರಮಂ ದಾಂಟಿದಳೊಲ್ದು ನೀಂ ನುಡಿವೆ ದೇವಂ ಧನ್ಯನೊಳ್ ನನ್ನೊಳಿಂ|
ಪೆಱತಂ ಬೇಟ್ಪನದೇನನಾನೊಸೆದನೊಳ್ ನಿನ್ನೊಳ್ಮಹಾಸ್ವಾಮಿಯೊಳ್ ||

ಆದೊಡಂ ಸ್ವಾಮಿ ಸುಪ್ರೀತನಾಗಿರ್ದೊಡಿದಕ್ಕೆ.

ಶತಸಂವತ್ಸರಮತ್ಯುದಾರಮತಿಯಿಂ ಲೋಕಂ ವಲಂ ಜೀವಿಕ |
ಚ್ಯುತನೊಳ್ ಶ್ರೀಪರಮಾತ್ಮನೊಳ್ ದೃಢಮಭಿನ್ನಂ ಭಕ್ತಿ ನಿಂದಿರ್ಕ್ಕೆ
ಮೇಣ್ || ಸತತಂ ಭೂತದಯಾನ್ವಿತಂ ಗುಣವಿಶೇಷಜ್ಞಂ ಸುಧೀ
ಬಾಂಧವಂ | ಕೃತಪುಣ್ಯಾತಿಶಯಂ ಜಗಂಬೆಳಗುತುಂ ವರ್ಧಿಕ್ಕೆ ಭೂ
ಪಾಲಕಂ ||೨೦೮||

**ಎಲ್ಲರುಂ**—ಇಂತಕ್ಕೆ.

(ಎಂದೆಲ್ಲರುಂ ತೆರಳ್ದರ್)

**|| ಇಂತಿದು ಷಷ್ಠಾಂಕಂ ||**



ನೆಱೆದಿರೆ ಕಲಿಯುಲ್ಲಯ್ಯಾ |
ಸಿರಮಿರ್ಪ್ಪತ್ತೊಂದುಮೆನಿಪ ಬರಿಸಂಗಳ್ ಸಂ ||
ದಿರೆ ರೌದ್ರಿನಾಮಕಂ ವ |
ತ್ಸರಮೆಸೆವಾಶ್ವಯುಜಶುಕ್ಲದೇಕಾದಶಿಯೊಳ್ ||

ಶ್ರೀಮಹಿಸುರದೇಶೇಂದ್ರ |
ಶ್ರೀಮತ್ಕೃಷ್ಣೇಂದ್ರಭೂಮಿಪಾಲಾಸ್ಥಾನೋ ||
ದ್ದಾಮಬುಧನುಭಯಕವಿತಾ |
ರಾಮಂ ಮಹಿಶೂರನಗರಸೀತಾರಾಮಂ ||

ವಾಣೀಪ್ರಸಾದದಿಂದೀ |
ವೇಣೀಸಂಹಾರನಾಟಕಪ್ರತಿಕೃತಿಯಂ ||
ಜಾಣುಳ್ಳನಿತು ನೆಗಟ್ಚಿದ |
ನೂಣೆಯಮೇನಿರೆಯುಮೊಲ್ದು ತಿದ್ದುಗೆ ವಿಬುಧರ್ ||

## || ಸಂಪೂರ್ಣಂ ||

**ಮಂಗಳಮಸ್ತು.**

ಶ್ರೀರಾಮಚಂದ್ರಚರಣಾರವಿಂದಾರ್ಪಿತಮಸ್ತು.



# ವೇಣೀಸಂಹಾರನಾಟಕಪ್ರತಿಕೃತಿಯೊಳಗಣ
# ಸುಭಾಷಿತಾವಳಿ.

---


ಪುಟಸಂಖ್ಯೆ

ಅರಿನಿಹತಬಂಧುದುಃಖದ |
ತೊಱೆಯನುದಸ್ರಪ್ಲವಂಗಳಿಂ ತೋಳ್ಗಳಿನು ||
ತ್ತರಿಪಂ ಕಲಿ— ||೮೨|| ೫೩

ಅನುಕ್ತರಾಗಿ ಹಿತಮೆಸಗುವುದಲ್ತೆ ಮೆಱೆಗುಂ ಮನದೊಳಿರ್ಪ್ಪ ಸಾಮಿಬಕುತಿಯುಂ ೧೧೪

ಆದಪ್ಪುವು ಗಡ ಕನಸುಗ |
ಳಾದಂ ತರದಿಂ ಶುಭಂಗಳಂತಶುಭಂಗಳ್ ||೪೨||

ಈಸಂಸಾರಮಿರ್ಪನ್ನಂ ಪುತ್ರರಿಹದೊಳಂ ಪರದೊಳಂ ಪಿತೃಗಳನನುವರ್ತಿಸಿ ನಡೆಯವೇಟ್ಕುಂ ೪೮

ಉಪಕಾರವಿಷಯಮಾದುದೆ ಅಟಿದಿಂಬಟಿಯುಮಿನ್ನುಪಕಾರಸಾಧನದಿನೇಂ ? ೮೬

ಕನಸುಗಳ್ ಅಶುಭಂಗಳಾದೊಡಂ ದೇವತಾಸಂಕೀರ್ತನದಿಂ ಶುಭಂಗಳಾಗಿ ಪರಿಣಮಿಕುಂ. ೨೦

ಕನಸಿನೊಳ್ ನರ ಮುಂಗುರಿ ಕೋಡಗಂ ಪುಲಿಯೆಂಬಿವಂ ಕಾಣ್ಬುದುಂ ಸರ್ಪಶತಮುಂ ಕೊಲ್ವುದುಂ ಪ್ರಶಸ್ತಮೆನ್ನರಭಿಜ್ಞರ್ ೨೭

ಕೊಡಂ ಬಾವಿಯೊಳ್ ಬೀೞ್ತೆ ಹಗ್ಗಮುಮನದಱೊಳ್ ಬಿಸುಡಲಾಗದು. ೮೬

ಜನಂ ಕನಸುಗಂಡಂದು ಆದೇನಂ ಕನವರಿಸದು ? ೨೦

ಜೀವಿಸಿಪ್ಪನ್ನೆಗಂ ಜಯಾಕಾಂಕ್ಷಿಗಳ್ಗರಸರ್ಗೆ ಪ್ರಜ್ಞಾಶಾಲಿಗಳುಪದೇಶಿಸವೇಟ್ಕುಂ. ೮೭

ತಮ್ಮೊಸಕಮುಂ ಪೆಸರುಮಂ ಅಱಿಕೆಗೆಯ್ದು ಪಿರಿಯರ್ಗೆ ವಂದನೆಯನೆಸಗಲ್ವೇಟ್ಕುಂ. ೯೮

ತೊಱೆದೊಡಮುಸ್ತ್ರಮನದಟು |
ಳ್ಳರದೇಂ ಕೈದಾಂತ ಪಗೆಗಳಂ ಬಾರಿಸರೇ ||೯೪|| ೫೯

ಹಕ್ಕುವಣಿಗಳ ಬೆಸನವುಂ ಬಿತ್ತರದಿಂ ಪೇಳ್ವುದು ಉಚಿತಮಲ್ತು. ೧೧೮

ಪ್ರಕೃತಿರ್ದುಸ್ತ್ಯಜಾ ನಾಮ (ಸ್ವಭಾವಮೆಂಬುದು ಬಿಡಲಪ್ಪುದಲ್ತು) ೩೩

ಪಿರಿಯರ್ ಅಭಿವಂದನೀಯರಲ್ತೆ ? ೧೩

ಪಿರಿಯರಂ ವಂದಿಸದೆ ಪೋಪುದು ತರನಲ್ತು. ೯೮

ಬೆಸಗೊಳೆ ಬೆಟ್ಟಿತೆನೆಯುಂ ಹಿತಮನೆ ಪೇಳ್ಗುವುದಾರವಂದಿರಲ್ತೆ ನೇಹಿಗರ್ ? ೨೭

ಭಗವಂತನ ಆಣತಿಯ ವಿಷಯದೊಳ್ ಅದಾವಂ ವಿಕಲ್ಪಮಂ ಮಾಡುವಂ ? ೧೧೩

ಭೂತಲದೊಳ್ ತತ್ತತ್ಕುಲ |
ಜಾತಿ ಬಿದಿಯಧೀನಂ ||೯೨|| ೫೮

ಮಱುಯೊಳ್ ಮೇಣ್ ಮುಂಗಡೆಯೊಳ್ |
ಪಿರಿದೋ ಮೇಣ್ಕಿಱಿದೊ ಬಿಡದೆ ತಾನೋ ಮೇಣ ||
ನ್ಯರೊ ತನ್ನಪಕಾರಿಗಳೊಳ್ |
ವಿರಚಿಸಿದಪಕಾರಮೊಡರಿಕುಂ ಕಡುನಲವಂ ||೩೨|| ೨೧

ರವಿಮುಖ್ಯಗ್ರಹಗತಿಯುಂ |
ಸವನಿಪ ಕನಸುಂ ನಿಮಿತ್ತಮುಪಮಾಚಿಕಮೆಂ ||
ಬಿವು ಜಗದೆ ಕಾಕತಾಳೀ |
ಯಮೆನಲ್ ಫಲಿಸುಗುಮವಕ್ಕೆ ಸೂರಿಗಳಂಜರ್ ||೪೩|| ೨೮

ಲೋಕಸಂಪ್ರದಾಯಮಂ ಮೀಱುವುದಾಗದು. ೧೨೯

ಶತ್ರುಸೈನ್ಯದೊಳಪ್ರಮತ್ತರಾಗಿ ಸಂಚರಿಸವೇಳ್ಕುಂ. ೧೭

ಸತಿಯರ್ಗೆ ಸಾಹಚರ್ಯದೆ |
ಪತಿಸದೃಶಮೆನಿಪ್ಪುದಲ್ತೆ ಚಿತ್ತಂ ಜಗದೊಳ್ ||
ಅತಿಮಂಜುಲಮೆನಿಸುವೊಡಂ |
ಲತೆ ವಿಷತರುಸಂಗದಿಂದೆ ಮೂರ್ಛೆಗೊಳಿಕ್ಕುಂ ||೨೨|| ೧೩

ಸದಾಚಾರಸಂಪ್ರದಾಯಮಂ ಮೀಱಲಾಗದು. ೯೮

ಹೀನತೆಯಿಲ್ಲದ ಜನಪರ್ |
ಹೀನರೆನಿಪ್ಪರೊಡನೆಂತು ಸಂಧಿಯನೊಲ್ವರ್ ||೧೨೬|| ೮೮